ಪ್ರಚಾರ ಪುಸ್ತಕ ಮಾಲೆ ೨೧೯

# ಪ್ರಾಚೀನ ಕೃಷಿತಂತ್ರಗಳು

ಡಿ. ಆರ್. ಗೋವಿಂದರಾಜು
ಹೆಚ್. ಕೆ. ನರಸಿಂಹೇಗೌಡ



ಪ್ರಚಾರ ಪುಸ್ತಕಮಾಲೆ - ೨೧೯

# ಪ್ರಾಚೀನ ಕೃಷಿತಂತ್ರಗಳು

ಡಿ. ಆರ್. ಗೋವಿಂದರಾಜು
ಎಚ್. ಕೆ. ನರಸಿಂಹೇಗೌಡ



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೮

ಮೊದಲನೆಯ ಮುದ್ರಣ: ೧೯೭೪

೫೦೦೦ ಪ್ರತಿಗಳು



ಬೆಲೆ: ೨೫ ಪೈಸೆ

ಪ್ರಕಾಶಕರು

ನಿರ್ದೇಶಕರು
ಪ್ರಸಾರಾಂಗ, ಮಾನಸಗಂಗೋತ್ರಿ
ಮೈಸೂರು-೫೭೦ ೦೦೬

ಮುದ್ರಕರು

ಪ್ರಭಾತ್ ಪ್ರಿಂಟರ್ಸ್, ಚಾಮುಂಡೇಶ್ವರಿ ಟಾಕೀಸ್ ಹಿಂಭಾಗ
ಮೈಸೂರು-೫೭೦ ೦೦೧

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ ವಿಶ್ವವಿದ್ಯಾನಿಲಯಗಳಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು ಗಳಿಸಿರುವ

ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದ ವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾ ನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾ ನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವ ಗಳನ್ನು ಹೋಗಲಾಡಿಸಿ ಸಮಾನತೆಯನ್ನುಸ್ಥಾಪಿಸಲು ಸಹಾಯಕ ವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ

ವಿಷಯಗಳನ್ನು ಕುರಿತ ಇನ್ನೂರ ಹದಿನೆಂಟು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಡಿ. ಆರ್. ಗೋವಿಂದರಾಜು ಮತ್ತು ಹೆಚ್. ಕೆ. ನರಸಿಂಹೇಗೌಡ ಇವರ 'ಪ್ರಾಚೀನ ಕೃಷಿತಂತ್ರಗಳು' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಡಿ. ವಿ. ಅರಸ್
ಕುಲಪತಿ

# ಲೇಖಕರ ಮಾತು

ಕೃಷಿ ಭಾರತದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದ ಪದ್ಧತಿ. ಕೃಷಿ ಸಂಶೋಧನೆ ನಾನಾ ಮುಖವಾಗಿ ಬೆಳೆದಿದೆ. ವಿಜ್ಞಾನ ಮತ್ತು ತಾಂತ್ರಿಕ ಕಲೆಗಳ ಬಳಕೆಯಿಂದ ಮಾತ್ರ ಕೃಷಿ ಲಾಭದಾಯಕ ಉದ್ಯಮವಾಗಬಲ್ಲದೆಂಬುದನ್ನು ಎಲ್ಲರೂ ಮನಗಂಡಿದ್ದಾರೆ.

ಈ ಕಿರು ಹೊತ್ತಗೆಯಲ್ಲಿ ಭಾರತೀಯ ಸಂಸ್ಕೃತಿಯಷ್ಟೇ ಪ್ರಾಚೀನವಾದ, ಅದರೊಳಕ್ಕೆ ಆಳವಾಗಿ ಬೇರು ಬಿಟ್ಟಿರುವ ಕೃಷಿ ತಂತ್ರಗಳ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಭೂಮಿ, ಉಳುಮೆ, ವ್ಯವಸಾಯ, ಉಪಕರಣಗಳೇ ಮುಂತಾದ ಎಲ್ಲವೂ ನಮ್ಮ ಸಂಸ್ಕೃತಿಯೊಡನೆ ಮಿಲನ ಹೊಂದಿರುವುದಲ್ಲದೆ ಅದರ ಅವಿಭಾಜ್ಯ ಅಂಗಗಳಾಗಿ ಉಳಿದು ದೇವ ದೇವತೆಯರ ಸ್ಥಾನವನ್ನು ಗಳಿಸಿದ್ದುವು. ಆದ ಕಾರಣವೇ ನಮ್ಮ ಹಿಂದಿನವರು ವ್ಯವಸಾಯವನ್ನು ಸಹ ಒಂದು ಧಾರ್ಮಿಕ ವಿಧಿಯೆಂದು ಪರಿಗಣಿಸುತ್ತಿದ್ದರು ಆದ್ದರಿಂದಲೇ ವರ್ಣಾಶ್ರಮ ಭೇದವಿಲ್ಲದೆ ಎಲ್ಲ ವರ್ಣದವರುಗಳೂ ಸಹ ಕೃಷಿಯನ್ನು ಕೈಗೊಂಡಿದ್ದರು. ಪ್ರಾಚೀನ ಕೃಷಿ ಪದ್ಧತಿಗಳನ್ನು ಆಧುನಿಕ ದೃಷ್ಟಿಯಿಂದ ತೂಗಿ ನೋಡಿ ತುಲನಾತ್ಮಕವಾಗಿ ವಿವೇಚಿಸಿ ಚರ್ಚಿಸುವುದು ಅಗತ್ಯವೆನಿಸುತ್ತದೆ. ಹಾಗೆ ವಿವೇಚನೆ ಮಾಡಿ ನೋಡಿದಾಗ ಅದರಿಂದ ಅಲ್ಪಸ್ವಲ್ಪವಾದರೂ ಪ್ರಯೋಜನವಾಗುವಂತಾದರೆ ನಮ್ಮ ಶ್ರಮ ಸಾರ್ಥಕ.

ಡಿ. ಆರ್. ಗೋವಿಂದರಾಜು

ಎಚ್. ಕೆ. ನರಸಿಂಹೇಗೌಡ

# ವಿಷಯ ನಿರೂಪಣೆ


| | | |
|---|---|---|
| ೧) | ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ | ೧ |
| ೨) | ಕೃಷಿಯ ಪಾತ್ರ | ೩ |
| ೩) | ಭೂಮಿ ಮತ್ತು ಸಸ್ಯಗಳ ಹುಟ್ಟು | ೬ |
| ೪) | ಸಸ್ಯಶಾಸ್ತ್ರ | ೮ |
| ೫) | ಮಣ್ಣನ್ನು ಹದಗೊಳಿಸುವಿಕೆ | ೩೨ |
| ೬) | ಗೊಬ್ಬರಗಳು | ೪೨ |
| ೭) | ಬೆಳೆಗಳು | ೪೯ |
| ೮) | ಹವಾಮಾನ | ೫೭ |
| ೯) | ಬೇಸಾಯ ಕ್ರಮಗಳು | ೫೮ |
| ೧೦) | ಸಸ್ಯಸಂರಕ್ಷಣೆ | ೫೯ |
| ೧೧) | ಪಶುಪಾಲನೆ | ೬೬ |
| ೧೨) | ಪರಿಸಮಾಪ್ತಿ | ೬೮ |


**

## ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಭಾರತೀಯ ಸಂಸ್ಕೃತಿ ಪ್ರಪಂಚದ ಅತ್ಯಂತ ಹಳೆಯ ಸಂಸ್ಕೃತಿಗಳಲ್ಲೊಂದು. ವೈವಿಧ್ಯತೆ ಮತ್ತು ವಿಶಾಲತೆಗಳು ಈ ಮಹಾನ್ ಸಂಸ್ಕೃತಿಯ ತಳಹದಿ ಇಂಥ ಉಜ್ವಲ ಸಂಸ್ಕೃತಿಯ ಉತ್ಕರ್ಷಣೆಯಲ್ಲಿ ಕೃಷಿಯ ಪಾತ್ರ ಗಹನ. ಕೃಷಿಯನ್ನು ಆಧರಿಸಿ ಅರಳಿತು ಭಾರತೀಯ ಸಂಸ್ಕೃತಿ. ಕೃಷಿ ಯಾವಾಗ ಪ್ರಾರಂಭವಾಯಿತು ಎನ್ನುವುದನ್ನು ಗುರುತಿಸಲು ಕಷ್ಟವಾದರೂ ಮಾನವ ಒಂದೆಡೆಯಲ್ಲಿ ಎಂದು ತಳವೂರಿ ನಿಂತು, ಕಾಡಿನಲ್ಲಿ ತಾನು ಶೇಖರಿಸಿದ ಬೀಜಗಳನ್ನು ಹಸಿನೆಲದ ಮೇಲೆ ಚೆಲ್ಲಿ ಅಂಥವೇ ಬೀಜಗಳನ್ನು ಸ್ವಲ್ಪ ಕಾಲದ ನಂತರ ಪಡೆದನೋ, ಕಾಡು ಪಶುಗಳನ್ನು ಪಳಗಿಸಿ ಅವುಗಳ ಹಾಲನ್ನು ಕುಡಿದನೋ, ಕ್ರೂರ ಪ್ರಾಣಿಗಳನ್ನು ದುಡಿಮೆಗೆ ಬಳಸಿಕೊಂಡನೋ ಅಂದೇ ವ್ಯವಸಾಯದ ಅಂಕುರಾರ್ಪಣೆಯಾಯಿತು. ಮಾನವನ ಬೌದ್ಧಿಕ ವಿಕಸನ ಹಾಗೂ ಕೃಷಿಯ ವಿಕಸನಗಳು ಅವಿಭಾಜ್ಯ ಅಂಗಗಳಾಗಿ ಮಿಳಿತವಾಗಿರುವುದನ್ನು ನಾವು ಗುರ್ತಿಸಬಹುದು. ಇವುಗಳಲ್ಲಿ ಒಂದಿಲ್ಲದೆ ಮತ್ತೊಂದಿರಲಾರದು.

ಒಂದು ದೇಶದ ಸಂಸ್ಕೃತಿ ಹಾಗೂ ಕೃಷಿ ಪದ್ಧತಿಗಳ ಪ್ರಾಚೀನತೆಯನ್ನು ಅಭ್ಯಸಿಸುವಾಗ ಅದರ ಭೌಗೋಳಿಕ ಹಿನ್ನೆಲೆಯನ್ನು ಗಮನಿಸುವುದು ಅತ್ಯಗತ್ಯ. ಮಾನವ ನೆಲೆನಿಲ್ಲಬೇಕಾದರೆ ಪ್ರಕೃತಿಯಿಂದ ಸಹಾಯವನ್ನಪೇಕ್ಷಿಸಬೇಕಾಗುತ್ತದೆ. ಇಂಥ ರಕ್ಷಣೆ ದೊರೆತಮೇಲೆ ಕೃಷಿ, ಅನಂತರ ಬೌದ್ಧಿಕ ಬೆಳವಣಿಗೆ, ಧರ್ಮ ಮತ್ತು ಸಂಸ್ಕೃತಿಗಳ ಅಭಿವೃದ್ಧಿ. ಅಂದರೆ ಪ್ರಕೃತಿಯ

ಆಶ್ರಯದಲ್ಲಿ ಸಸ್ಯಗಳು ಮತ್ತು ಅವಕ್ಕೆ ಬೇಕಾಗುವ ಕೃಷಿ ಪದ್ಧತಿಗಳು ವೃದ್ಧಿಯಾಗಬೇಕು. ಭೌಗೋಳಿಕ ಲಕ್ಷಣಗಳು ಪ್ರಕೃತಿಯ ಅಂಗಗಳು. ಕೃಷಿಯ ಅಥವಾ ಸಂಸ್ಕೃತಿಯ ಜಾಜ್ವಲ್ಯಮಾನತೆಗೆ ಇವುಗಳ ಕೊಡುಗೆ ಅಪಾರ.

ಭಾರತದ ಭೌಗೋಳಿಕ ಹಿನ್ನೆಲೆಯನ್ನು ಪರಿಶೀಲಿಸಿದಾಗ ಎದ್ದುಕಾಣುವ ಅಂಶಗಳು : ಉತ್ತರದಲ್ಲಿ ಉತ್ತುಂಗ ಹಿಮಾಲಯ ಶ್ರೇಣಿಗಳು, ದಕ್ಷಿಣದಲ್ಲಿ ಅರೇಬಿಯನ್ ಸಮುದ್ರ, ಬಂಗಾಳ ಕೊಲ್ಲಿ ಮತ್ತು ಹಿಂದೂಮಹಾಸಾಗರ. ಉತ್ತರದ ಸಿಂಧೂ ಮತ್ತು ಗಂಗಾ ನದಿಗಳ ಫಲವತ್ತಾದ ವಿಶಾಲ ಬಯಲುಗಳು, ಭಾರತೀಯ ಸಂಸ್ಕೃತಿಯ ತೂಗುತೊಟ್ಟಿಲುಗಳು. ದಕ್ಷಿಣದಲ್ಲಿ ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಹಾಗೂ ಸಾಕಷ್ಟು ವಿಶಾಲವಾದ ಕರಾವಳಿ ಪ್ರದೇಶಗಳು. ಕೃಷ್ಣ, ಕಾವೇರಿ, ಗೋದಾವರಿ, ಶರಾವತಿ ಮುಂತಾದ ಅನೇಕ ನದಿಗಳು ಹುಟ್ಟಿ ಹರಿಯುವ ವಿಶಾಲ ಪ್ರಸ್ಥಭೂಮಿ. ಆದ್ದರಿಂದಲೇ ಇವುಗಳಿಗೆಲ್ಲ ದೇವ-ದೇವತೆಯರ ಸ್ಥಾನಗಳನ್ನು ನೀಡಿ –

"ಗಂಗೇಚ ಯಮುನೇ ಚೈವ ಗೋದಾವರಿ ಸರಸ್ವತಿ
ನರ್ಮದೇ ಸಿಂಧು ಕಾವೇರಿ ಜಲಸ್ಮಿನ್ ಸನ್ನಿಧಿಂ ಕುರು"

ಎಂದು ಹಾಡಿದ್ದಾರೆ.

ತುಂಬಿ ಹರಿಯುವ ನದಿಗಳು, ಉತ್ತರದ ಹಿಮಾಲಯಗಳಲ್ಲಿನ ನಿತ್ಯಹರಿದ್ವರ್ಣದ ಕಾಡುಗಳು, ದಕ್ಷಿಣದ ಉಷ್ಣವಲಯದಲ್ಲಿನ ದಟ್ಟಕಾಡುಗಳು ರುದ್ರ ರಮಣೀಯ ವಾತಾವರಣಗಳ ಇಂಥ ವೈವಿಧ್ಯತೆ ವಿವಿಧ ಬುಡಕಟ್ಟುಗಳ ಆಗಮನಕ್ಕೆ, ಆಕ್ರಮಣಕ್ಕೆ ದಾರಿಮಾಡಿಕೊಟ್ಟಿತು. ವಿಶ್ವದ ವಿವಿಧ ಎಡೆ

ಗಳಿಂದ ಬಂದಂಥ ಜನರು ತಮಗೊಗ್ಗುವ ವಾತಾವರಣಗಳಲ್ಲಿ ಹೋಗಿ ನೆಲೆಸಿದರು. ಕ್ರಮೇಣ ಲೀನವಾದರು. ಭೂಮಿಯ ಫಲವತ್ತತೆ ಮತ್ತು ಕೃಷಿಯ ಸುಲಭ ಸಾಧ್ಯತೆಗಳು ಆಕ್ರಮಣ ಕಾರರಿಗೆ ಆಮಂತ್ರಣವನ್ನಿತ್ತವು. ಉತ್ತರದ ತುದಿಯಲ್ಲಿ ಇಂಥ ಆಕ್ರಮಣವನ್ನೆದುರಿಸಬೇಕಾದ ಜನರು ಶೂರತ್ವವನ್ನು ಮೈಗೂಡಿ ಸಿಕೊಂಡರು, ದಕ್ಷಿಣದವರು ಚಿಂತನಶೀಲರಾಗಿ ಕಲೆಯಲ್ಲಿ ನೈಪುಣ್ಯತೆಯನ್ನು ಸಾಧಿಸಿದರು.

ಪ್ರಕೃತಿಯ ಇಂಥ ಕೊಡುಗೆಗಳಿಂದ ಸಂತೃಪ್ತರಾದ ಜನರಿಗೆ ಪರ್ವತಗಳು, ವನಗಳು, ನದಿಗಳು, ಕಲ್ಲು, ಮಣ್ಣು, ಜೀವಜಂತು ಗಳು ಕೇವಲ ಚರ ಅಥವ ಅಚರ ವಸ್ತುಗಳಾಗಿ ಉಳಿಯದೆ ಅವರ ದೈನಂದಿನ ಜೀವನದಲ್ಲಿ ಮಿಲನ ಹೊಂದಿ ಒಂದು ಸ್ವರೂಪವನ್ನು ಗಳಿಸಿ ದೈವತ್ವವನ್ನು ಸಂಪಾದಿಸಿಕೊಂಡವು; ಋಷಿಗಳಿಗೆ, ಕವಿ ಗಳಿಗೆ ತಂಗುದಾಣಗಳಾದವು ; ಸ್ಫೂರ್ತಿ ಮತ್ತು ಚೈತನ್ಯ ನೀಡಿ ದವು. ಹಾಲನ್ನು ನೀಡುವ ಹಸು ಗೋಮಾತೆಯಾಯಿತು. ಆಹಾರವನ್ನು ನೀಡಿದ ಧಾನ್ಯಗಳು ದೇವದೇವತೆಯರ ಸಂಕೇತ ಗಳಾದವು. ಪರ್ವತಗಳು ದೇವದೇವತೆಯರ ಆವಾಸಸ್ಥಾನ ಗಳಾಗಿ ಉಳಿದು ಅಲ್ಲಿ ನೆಲೆನಿಂತ ಋಷಿಗಳಿಂದ ಜ್ಞಾನಧಾರೆ ಓತಪ್ರೋತವಾಗಿ ಹರಿದು ಬಂತು.

## ಕೃಷಿಯ ಪಾತ್ರ

ಪ್ರಾಚೀನ ಕಾಲದ ಋಷಿಗಳು ವ್ಯವಸಾಯವನ್ನು ಗೌರವಾನ್ವಿತ ಕಸುಬು ಎಂದು ತಿಳಿದಿದ್ದರು. ಜೀವನೋಪಾಯ ಕ್ಕಾಗಿ ವ್ಯವಸಾಯವೂ ತಪಸ್ಸಿನ ಒಂದು ಅಂಗ ; ಕೃಷಿಯೂ

ಸಾಧನೆಯೇ, ಅದಿಲ್ಲದೆ ಎಂಥ ಕಾವ್ಯವೇ ಆಗಲೀ, ಪಾಂಡಿತ್ಯ ಪೂರ್ಣ ತತ್ವಜ್ಞಾನವಾಗಲೀ ಅರಳಲಾರದು ಎಂದು ನಂಬಿದ್ದರು. ಅಂದಿನವರು ಗುರ್ತಿಸಿದ್ದ ಕೃಷಿಯ ಮೂರು ಅಂಗಗಳಾದ 1. ಭೂಮಿಯನ್ನು ಹದಗೊಳಿಸುವಿಕೆ, 2. ಬೀಜ ಬಿತ್ತುವಿಕೆ ಹಾಗೂ 3. ಬೆಳೆದ ಧಾನ್ಯವನ್ನು ಕೊಯ್ಯುವಿಕೆಗಳು ಇಂದೂ ಉಳಿದಿವೆ. ಸಾಮೂಹಿಕ ಬೇಸಾಯ, ಗೋಮಾಳಗಳು, ಸಾಮೂಹಿಕ ಕಾರ್ಯ ಮುಂತಾದವುಗಳು ಅಂದಿದ್ದ ಮುಖ್ಯಾಂಶಗಳು. ಇಂಥ ವಿಧಾನಗಳು ಕ್ರಮೇಣ ಮರೆತುಹೋಗಿ ಇತ್ತೀಚೆಗೆ ಮತ್ತೆ ಇಂಥ ಕೃಷಿ ವಿಧಾನಗಳಿಂದ ಲಾಭವಿದೆ ಎಂದು ಹೇಳುತ್ತಿದ್ದೇವೆ. ಉಳುವವರು, ಬಿತ್ತುವವರು, ಕೊಯ್ಲುಗಾರರು, ಸಂಗ್ರಹಕರು, ತರುವವರು ಮತ್ತು ವಿತರಣೆಗಾರರು ಎಂದು ಕೃಷಿಗಾರರಲ್ಲೇ ವಿಂಗಡಣೆ ಇದ್ದುದರ ಫಲವಾಗಿ ಆಯಾ ಗುಂಪಿನ ಜನರು ತಮ್ಮ ತಮ್ಮ ಕಾರ್ಯಗಳಲ್ಲಿ ನೈಪುಣ್ಯತೆಯನ್ನು ಸಾಧಿಸಿದ್ದರು. ಕೃಷಿಯನ್ನು ತಮ್ಮ ಬಾಳಿಗಾಧಾರವಾದ ಕಸುಬು ಎಂದು ನಂಬಿದ್ದರಿಂದಲೇ, ಅದರಲ್ಲಿ ಬಳಸುತ್ತಿದ್ದ ಮತ್ತು ಅವಿಭಾಜ್ಯ ಅಂಗಗಳಾದ ಭೂಮಿ, ದನಕರುಗಳು ಮತ್ತು ಗಿಡಗಳು ಅಲ್ಲದೇ ಉಪಕರಣಗಳು ಕೂಡ ಪೂಜಾರ್ಹವಾದವು. ಈ ಕೆಳಗೆ ಋಗ್ವೇದದಿಂದ ಕೆಲವು ಉದಾಹರಣೆಗಳನ್ನು ನೀಡಲಾಗಿದೆ.

“ಭೂ ಒಡೆಯನೇ, ನಮಗೆ ಹಾಲು ಕರೆಯುವ ಹಸು ನೀಡುವಂಥ ಸಿಹಿಯಾದ, ಜೇನಿನ ಹಾಗೆ ತೊಟ್ಟಿಕ್ಕುವ, ಬೆಣ್ಣೆಯಂತೆ ಮಧುರವಾದ ನೀರನ್ನು ನೀಡು”

“ಭೂಮಿಯ ಮೇಲಣ ಮೂಲಿಕೆಗಳು (ಬೆಳೆಗಳು) ರುಚಿಯಾಗಿರಲಿ, ದೇವಲೋಕ, ನೆಲ, ಜಲಗಳು ದಯಾಪೂರಿತ

ವಾಗಿರಲಿ, ಭೂಮಿಯ ಒಡೆಯನಾದ ದೇವರು ನಮ್ಮ ಮೇಲೆ ಕರುಣೆಯುಳ್ಳವನಾಗಲಿ"

"ಗೋವುಗಳು ಮತ್ತು ಮನುಷ್ಯರು ಸಂತೋಷದಿಂದ ಕಾರ್ಯಗತರಾಗಲಿ, ನೇಗಿಲ ಸಾಲು ಮತ್ತು ಗೆರೆ ಹಾಗೂ ಚಾವಟಿ ಸಂತೋಷದಿಂದ ಅಲುಗಲಿ"

"ನೇಗಿಲ ಕುಳಗಳು ಭೂಮಿಯನ್ನು ಸಂತೋಷದಿಂದ ಸೀಳಲಿ, ರೈತರು ಎತ್ತುಗಳೊಡನೆ ಸಂತೋಷದಿಂದ ಹೋಗಲಿ, ಪರ್ಜನ್ಯನು ಭೂಮಿಯನ್ನು ಮಧುರವಾದ ಮಳೆಯಿಂದ ಸಂತೋಷಗೊಳಿಸಲಿ"

"ರೈತರೇ ನೇಗಿಲುಗಳನ್ನು ತೆಗೆದುಕೊಂಡು ನೊಗಗಳಿಗೆ ಕಟ್ಟಿ, ಈಗ ಭೂಮಿಯ ಗರ್ಭವು ತಯಾರಾಗಿದೆ, ಅದರಲ್ಲಿ ಬೀಜವನ್ನು ಬಿತ್ತಿ. ನಮ್ಮ ಪ್ರಾರ್ಥನೆಯಿಂದ ಅಲ್ಲಿ ಆಹಾರವು ಸಮೃದ್ಧಿಯಾಗಿರಲಿ, ಕಾಳು ಕುಡುಗೋಲಿನ ಕಡೆಗೆ ಬೀಳಲಿ"

ಹೀಗೆ ಅನೇಕ ಕಡೆಗಳಲ್ಲಿ ವ್ಯವಸಾಯ ಮತ್ತು ಅದಕ್ಕೆ ಬೇಕಾಗುವ ಸಲಕರಣೆಗಳ ಬಗ್ಗೆ ಚಿಂತಿಸಿ, ತನ್ನ ಪುರೋಭಿವೃದ್ಧಿಯನ್ನು ಮಾಡುವ ನಿರ್ಜೀವ ವಸ್ತುಗಳನ್ನೂ ಸಹ ತಾರತಮ್ಯವಿಲ್ಲದೆ ಭಯ ಭಕ್ತಿಯಿಂದ ಸ್ತುತಿಸಿದ್ದಾರೆ. ಹೆಚ್ಚಾದ ಧಾನ್ಯವನ್ನು ದಾನಮಾಡಬೇಕು ಎಂಬ ಅರಿವೂ ಅವರಲ್ಲಿತ್ತು.

ಯಾರು ಹಸಿದವನಿಗೆ, ಕಷ್ಟದಲ್ಲಿರುವವನಿಗೆ, ತನ್ನಲ್ಲಿ ಆಹಾರವಿದ್ದೂ ನೀಡದೆ ಸ್ವಂತ ಸುಖವನ್ನೇ ಬಯಸುತ್ತಾನೋ ಅವನು ತಬ್ಬಲಿಯಂತಾಗುತ್ತಾನೆ. ಯಾವನು ಹೆಚ್ಚಿನ ಆಹಾರ

ವನ್ನು ಭಿಕ್ಷುಕರಿಗೆ, ಬೇಡುವವರಿಗೆ, ಕಷ್ಟದಲ್ಲಿರುವವರಿಗೆ ನೀಡುತ್ತಾನೋ ಅವನಿಗೆ ದೇವರು ಒಳ್ಳೆಯದನ್ನು ಮಾಡುತ್ತಾನೆ ಎಂಬ ನಂಬುಗೆಯಿತ್ತು. ಆದರೆ ಅತಿಥಿ ಅಭ್ಯಾಗತರಿಗೆ ಅನ್ನನೀಡದವನು ಅನಾರ್ಯ, ಪಾಪಿ ಮತ್ತು ಅವನಿಗೆ ದುಃಖಕರ ಮರಣ ಕಾದಿರುತ್ತದೆ ಎಂದು ಎಚ್ಚರಿಕೆ ನೀಡಿದ್ದಾರೆ.

## ಭೂಮಿ ಮತ್ತು ಸಸ್ಯಗಳ ಹುಟ್ಟು

ಭೂಮಿ ಯಾವಾಗ ಮತ್ತು ಹೇಗೆ ಹುಟ್ಟಿತು ಹಾಗೂ ಸಸ್ಯಗಳು ಈ ಗ್ರಹದ ಮೇಲೆ ಪದಾರ್ಪಣೆ ಮಾಡಿದ ಬಗೆ ಹೇಗೆ ಎಂಬುದು ಒಂದು ಒಗಟಾಗಿತ್ತು. ಆದರೆ ಇತ್ತೀಚೆಗೆ ಸ್ಯಸಗಳ ಉಗಮ ಮತ್ತು ವೃದ್ಧಿಯನ್ನು ಪೂರ್ಣವಾಗಿ ವಿವರಿಸಲಾಗಿದೆ. ಭೂಮಿ ಮೊದಲು ಹುಟ್ಟಿತು, ಅದರ ಮೇಲೆ ಸಸ್ಯಗಳು, ಇವುಗಳ ಬೆನ್ನಹಿಂದೆ ಮಾನವ ಹುಟ್ಟಿದ ಎಂಬುದು ನಿರ್ವಿವಾದ. ಇದನ್ನು ಛಂದೋಗ್ಯ ಉಪನಿಷತ್ತಿನಲ್ಲಿ, ಭೂಮಿಯೇ ಈ ಎಲ್ಲ ವಸ್ತುಗಳ ಮೂಲ, ನೀರು ಭೂಮಿಯ ಮೂಲ, ಸಸ್ಯಗಳಲ್ಲಿ ಭೂಮಿಯ ಸಾರವಿದೆ ; ಇವುಗಳ ಸಾರವನ್ನು ಮನುಷ್ಯ ಪ್ರತಿನಿಧಿಸುತ್ತಾನೆ ಎಂದು ಹೇಳಿದೆ. ತೈತ್ತರೀಯ ಉಪನಿಷತ್ತಿನ ಪ್ರಕಾರ ಮೂಲ ವಸ್ತುಗಳು ಐದು – ಆಕಾಶ, ಗಾಳಿ, ಬೆಂಕಿ, ನೀರು ಮತ್ತು ಭೂಮಿ. ಇವುಗಳಲ್ಲಿ, ಬ್ರಹ್ಮನಿಂದ ಆಕಾಶ, ಆಕಾಶದಿಂದ ಗಾಳಿ, ಗಾಳಿಯಿಂದ ಬೆಂಕಿ, ಬೆಂಕಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಮೂಲಿಕೆ, ಮೂಲಿಕೆಗಳಿಂದ ಆಹಾರ, ಆಹಾರದಿಂದ ಬೀಜ, ಬೀಜದಿಂದ ಮನುಷ್ಯ, ಹೀಗೆ ವಿರಾಟ್ ಬ್ರಹ್ಮನಿಂದ ಮನುಷ್ಯ ಹೇಗೆ ಕುಡಿಯೊಡೆದ ಎಂದು ಹೇಳಲಾಗಿದೆ. ಈ ದೃಷ್ಟಿಯನ್ನು ಯಜ್ಞವಲ್ಕ್ಯನು ತನ್ನ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಅನುಮೋದಿಸುತ್ತ ಚರ ಮತ್ತು ಅಚರಗಳ

ಸೃಷ್ಟಿಗೆ ಭೂಮಿಯೇ ಮೂಲ; ಅವುಗಳ ದೇಹದ ಘಟಕಗಳನ್ನು ಭೂಮಿ ಸರಬರಾಜು ಮಾಡುತ್ತದೆ. ಹೀಗೆ ಮಾಡಲು ನೀರೇ ಮೂಲ. ಹುಲ್ಲು, ಬಳ್ಳಿ ಮುಂತಾದ ಸಸ್ಯಗಳಲ್ಲಿ ನೀರಿನ ಸಾರವಿರುತ್ತದೆ. ಹೂಗಳು ಸಸ್ಯಗಳ ಸಾರ, ಭತ್ತ, ಗೋಧಿ ಮುಂತಾದ ಫಲಗಳು ಹೂಗಳ ಸಾರ ಎಂದು ಹೇಳಿದ್ದಾನೆ. ಬುದ್ಧನ ಸಂವಾದಗಳಲ್ಲಿ ಆಧುನಿಕ ವಿಕಾಸವಾದದ ಚಹರೆಗಳು ಕಂಡುಬರುತ್ತವೆ; ನಮ್ಮ ಈ ವಿಶ್ವ ಒಂದು ಕಾಲಕ್ಕೆ ನಾಶ ಹೊಂದುತ್ತದೆ; ಫಲವಾಗಿ ಬ್ರಹ್ಮಾಂಡದ ಬೇರೆಲ್ಲೋ ಒಂದು ಕಡೆ ಜೀವಿಗಳು ಹುಟ್ಟುತ್ತವೆ. ಹೊಸದಾಗಿ ರೂಪುಗೊಂಡ ಪ್ರಪಂಚವು ಅಂಧಕಾರದಲ್ಲಿ ಮುಳುಗಿರುತ್ತದೆ. ಅಂಧಕಾರವೆಂದರೆ ಕುರುಡುಗೊಳಿಸುವ ಕತ್ತಲು. ಬೆಳಕಿನ ಪ್ರಪಂಚದಿಂದ, ಈ ಹೊಸ ಪ್ರಪಂಚಕ್ಕೆ ಜೀವಿಗಳು ಬೀಳುತ್ತವೆ. ಈ ಜೀವಿಗಳು ಉಲ್ಲೆಯಾಗಿ ಸಂತೋಷದಲ್ಲಿ ಆಕಾಶದಲ್ಲಿ ತೇಲುತ್ತ ಹೊಳೆಯುತ್ತವೆ ನೀರಿನಿಂದ ಘಮಘಮಿಸುವ ಹಾಲಿನ ಕೆನೆ ಅಥವಾ ಮಧುರವಾದ ಬೆಣ್ಣೆಯಂಥ ರಸಪೃಥ್ವಿಯು ಉದ್ಭವಿಸುತ್ತದೆ. ಹೀಗೆ ಉತ್ಪತ್ತಿಯಾದ ಪೃಥ್ವಿಯೊಡನೆ ತೇಲುತ್ತಿರುವ ಜೀವಿಗಳು ಸಂಪರ್ಕಗೊಂಡು. ಘನೀಭವಿಸಿ, ತೇಜೋಹೀನವಾಗುತ್ತವೆ. ಸೂರ್ಯ, ಚಂದ್ರ, ನಕ್ಷತ್ರ, ನೀಹಾರಿಕೆಗಳು ಮತ್ತೊಮ್ಮೆ ಹುಟ್ಟುತ್ತವೆ. ನೈಸರ್ಗಿಕ ಋತುಗಳು ಅಸ್ತಿತ್ವಕ್ಕೆ ಬರುತ್ತವೆ. ಈ ಮಧ್ಯೆ ರಸಪೃಥ್ವಿಯು ನಿಧಾನವಾಗಿ ಘನೀಭವಿಸುತ್ತದೆ ಮತ್ತು ಅದರ ಸುವಾಸನೆ ಹಾಗೂ ಮಧುರ ಸ್ವಾದಗಳನ್ನು ಕಳೆದುಕೊಳ್ಳುತ್ತದೆ. ಕಾಲಕ್ರಮೇಣ ಕೀಳುವರ್ಗದ ಸಸ್ಯಗಳು, ನಂತರ ಮೇಲ್ತರದ ಸಸ್ಯಗಳು ಉದ್ಭವಿಸುತ್ತವೆ. ಬಹಳ ಕಾಲದ ನಂತರ ಜೀವನ ಕೇಂದ್ರ ಶಕ್ತಿಗಳಾದ ಸೂರ್ಯ, ಚಂದ್ರ ಮುಂತಾದ

ದೈವಿಕ ಪೂರ್ವಿಕರಿಂದ ಮಾನವ ಇಳಿದು ಬರುತ್ತಾನೆ ಎಂಬ ವಿಚಾರಪೂರ್ಣ ಚಿಂತನೆಗಳು ಕಂಡುಬರುತ್ತವೆ. ಈ ಎಲ್ಲವು ಗಳೂ ಊಹೆಯ ಮೇಲೆ ಆಧರಿಸಿದ್ದರೂ, ಅನುಭವ ಹಾಗೂ ಕಲ್ಪನೆಯ ಉತ್ತುಂಗತೆಯನ್ನು ನೋಡಬಹುದು.

## ಸಸ್ಯಶಾಸ್ತ್ರ

ವ್ಯವಸಾಯ, ಸಸ್ಯಗಳನ್ನು ಒಗ್ಗಿಸಿಕೊಂಡು, ಅವುಗಳನ್ನು ಬೆಳೆಸುವ ಕಲೆ. ಸಸ್ಯಗಳನ್ನು ಬೆಳೆಸಬೇಕಾದರೆ ಸಸ್ಯಗಳ ಬಗ್ಗೆ ಮತ್ತು ಭೂಮಿಯ ಬಗ್ಗೆ ವ್ಯವಸಾಯಗಾರನಿಗೆ ಅರಿವಿರುವುದು ಅತ್ಯಗತ್ಯ. ಸಸ್ಯಜೀವನವನ್ನರಿತು ಅವುಗಳನ್ನು ಲಾಭದಾಯಕ ವಾಗಿ ಬೆಳೆಸಿಕೊಳ್ಳುವ ಕಲೆಯು ನಮ್ಮ ಪ್ರಾಚೀನರಿಗೆ ಋಗ್ವೇದದ ಕಾಲದಿಂದಲೂ ಗೊತ್ತಿತ್ತು. ಸಸ್ಯಶಾಸ್ತ್ರ ಹಾಗೂ ವ್ಯವಸಾಯದ ಬಗ್ಗೆ ಅನೇಕ ಪ್ರಾಚೀನ ಗ್ರಂಥಗಳಲ್ಲಿ ಮಾಹಿತಿಯು ವಿಪುಲವಾಗಿ ದೊರೆತರೂ ಸಹ ವರಾಹಮಿಹಿರ ತನ್ನ ಅಗ್ನಿಪುರಾಣ ಮತ್ತು ಬೃಹತ್ ಸಂಹಿತೆಗಳಲ್ಲಿ ಮರಗಳನ್ನು ಹಾಗೂ ಗಿಡಗಳನ್ನು ಬೆಳೆಸುವ ಕಲೆಗಳನ್ನು ಧಾರಾಳವಾಗಿ ಚರ್ಚಿಸಿದ್ದಾನೆ. ಸಸ್ಯ ಜೀವನದಲ್ಲಿ ಬೀಜಗಳು ಮತ್ತು ಅವುಗಳ ಆಯ್ಕೆ, ಪೋಳಿಯುವಿಕೆ ಬಿತ್ತುವಿಕೆ, ನೆಡುವಿಕೆ, ಪೋಷಿಸುವಿಕೆ, ಗೊಬ್ಬರ ಹಾಕುವಿಕೆ, ಭೂಮಿಯನ್ನು ಹದಗೊಳಿಸುವಿಕೆ ಮುಂತಾದವು ಅವಿಭಾಜ್ಯ ಅಂಗಗಳು ಎಂದು ಗುರ್ತಿಸಿದ್ದಾನೆ. ಸಸ್ಯಶಾಸ್ತ್ರ, ವ್ಯವಸಾಯ ಮತ್ತು ವೈದ್ಯಶಾಸ್ತ್ರಗಳು ಒಂದನ್ನೊಂದು ಅವಲಂಬಿಸಿದ್ದವು ಎಂದು ನಾವು ಊಹಿಸಿಕೊಳ್ಳಬಹುದು. ಮೂಲಿಕೆಗಳನ್ನು ಪತ್ತೆಹಚ್ಚಲು, ವಿಂಗಡಿಸಲು ಮತ್ತು ಉಪಯೋಗಿಸಲು ಸಸ್ಯ ಶಾಸ್ತ್ರದ ಜ್ಞಾನ ಹಾಗೂ ಇವುಗಳನ್ನು ಲಾಭದಾಯಕವಾಗಿ

ಬೆಳೆಯಲು ವ್ಯವಸಾಯ ತಂತ್ರದ ಜ್ಞಾನ ಬೇಕಾಗುತ್ತದೆಂದು ತಿಳಿದು ವ್ಯವಸಾಯವನ್ನು ನೋಡಿಕೊಳ್ಳಲೆಂದೇ ಒಬ್ಬ ಅಧಿಕಾರಿಯನ್ನು ನೇಮಿಸುತ್ತಿದ್ದ ಅನೇಕ ಉದಾಹರಣೆಗಳು ದೊರೆಯುತ್ತವೆ.

## ಸಸ್ಯಗಳ ಬಾಹ್ಯರೂಪ

ಸಸ್ಯ ಅನೇಕ ಅಂಗಗಳ ಸಂಗಮ. ವಿಷ್ಣುಪುರಾಣದಲ್ಲಿ ಭ್ರೂಣ (ಅಂಕುರ), ಬೇರು (ಮೂಲ), ಕಾಂಡ (ನಾಳ), ಎಲೆ (ಪತ್ರ), ಹೂವು (ಪುಷ್ಪ), ಹಾಲು (ಕ್ಷೀರ), ಹೊಟ್ಟುಪತ್ರ (ತುಷ), ಬೀಜಪಾತ್ರೆ, ಬೀಜ (ತುಂಡಲ) ಮತ್ತು ಭ್ರೂಣಹಾರ (ಕಣ) ಮುಂತಾದವುಗಳು ಭತ್ತದಲ್ಲಿರುತ್ತವೆ ಎಂದು ವಿಷ್ಣುಪುರಾಣದಲ್ಲಿ ಹೇಳಿದ್ದೇ ಅಲ್ಲದೆ, ಇದಕ್ಕೆ ಮಣ್ಣು, ನೀರು ಇತ್ಯಾದಿಗಳನ್ನು ಸಕಾಲಕ್ಕೆ ಒದಗಿಸಿದರೆ ಇವೆಲ್ಲವೂ ಪ್ರಕಟಗೊಳ್ಳುತ್ತವೆ ಎಂದು ವಿವರಿಸಿದೆ.

ಆಧುನಿಕ ದೃಷ್ಟಿಯಿಂದ ಮೇಲುದರ್ಜೆಯ ಯಾವುದೇ ಗಿಡವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಭೂಮಿಯ ಮೇಲಿರುವ ಕಾಂಡ ಮತ್ತು ಭೂಮಿಯ ಒಳಗಣ ಬೇರು. ಇವುಗಳಲ್ಲಿ ಬೇರಿಗೆ ಮೂಲ ಅಥವಾ ಪಾದವೆಂದೂ, ಇದರ ಮೂಲಕ ಗಿಡವು ಭೂಮಿಯಿಂದ ರಸವನ್ನು ಕುಡಿಯುತ್ತದೆಂದು ತಿಳಿಯಲಾಗಿತ್ತು. ಅನೇಕ ಬಾರಿ ವಿವಿಧ ರೂಪಹೊಂದಿ ನೇತಾಡುವ ಆಗಂತುಕ ಬೇರುಗಳಿಗೆ ಶಾಖಾಶೀಫಗಳೆಂತಲೂ, ಆಲ ಮುಂತಾದ ಮರಗಳ ರೆಂಬೆಗಳಿಂದ ಬೀಳುವ ಬಿಳಿಲು ಬೇರುಗಳಿಗೆ ಅವಲೋಹಗಳೆಂತಲೂ ಹೆಸರಿತ್ತು.

ಭೂಮಿಯ ಮೇಲಿರುವ ಮುಖ್ಯ ಕಾಂಡಕ್ಕೆ ಪ್ರಕಾಂಡ ವೆಂತಲೂ, ಇವುಗಳು ಗಡುಸಾಗಿದ್ದರೆ ವನಸ್ಪತಿಗಳೆಂತಲೂ, ಅಶಕ್ತವಾಗಿದ್ದು ಬೇರೆ ಕಾಂಡಗಳ ಸುತ್ತ ಸುತ್ತಿಕೊಳ್ಳುವಂಥವು ಗಳಿಗೆ ಬಳ್ಳಿಗಳು ಅಥವಾ ಲತೆಗಳೆಂದೂ, ಇಂಥ ಕಾಂಡವು ನಯ ವಾಗಿಲ್ಲದೆ ಗಂಟುಗಂಟಾಗಿ ಅಥವಾ ಗಿಣ್ಣುಗಳಿಂದ ಕೂಡಿದ್ದರೆ ಶತಪರ್ವವೆಂದೂ, ಪ್ರತಿ ಗಿಣ್ಣನ್ನು ಪರ್ವ ಅಥವಾ ಗ್ರಂಥಿಎಂತಲೂ ಕರೆಯಲಾಗುತ್ತಿತ್ತು. ಕಾಂಡವಿರುವ ಗಿಡಗಳನ್ನು ಸಕಾಂಡ ಗಳೆಂತಲೂ, ಕಾಂಡವಿಲ್ಲದವುಗಳನ್ನು ಅಪ್ರಕಾಂಡಗಳೆಂತಲೂ, ಗಿಡ್ಡಬೇರು ಮತ್ತು ಕುಬ್ಜ ಕೊಂಬೆಗಳ ಗಿಡಗಳನ್ನು ಕ್ಷುಪಗಳು ಎಂತಲೂ, ಮುಖ್ಯ ಕೊಂಬೆಗಳನ್ನು ಸ್ಕಂದಶಾಖೆಯೆಂತಲೂ, (ಎರಡನೆ ಮತ್ತು ಮೂರನೆ) ಕವಲುಗಳನ್ನು ಪ್ರತಿ ಶಾಖೆ ಮತ್ತು ಅನುಶಾಖೆಗಳೆಂತಲೂ ಕರೆದಿದ್ದಾರೆ. ರೆಂಬೆ ಕೊಂಬೆಗಳಿಲ್ಲದ ಕಾಂಡಗಳನ್ನು ಸ್ಥಸು ಅಥವಾ ಶಂಖುಗಳೆಂದೂ, ಮರದ ಮುಟ್ಟ ಲಾಗದ ಕೊನೆಯನ್ನು ಅಗ್ರ ಅಥವಾ ಶಿಖರವೆಂದು ಕರೆಯಲಾಗಿದೆ.

ಬೇರೆಗಿಡಗಳ ಮೇಲೆ ಬೆಳೆಯುತ್ತಿದ್ದ ಗಿಡಗಳಿಗೆ ಪರಗಾಛ್ಛ ಗಳೆಂದೂ, ಅತಿಥೇಯ ಗಿಡವನ್ನು ತಿನ್ನುತ್ತಿದ್ದ (ರಸ ಹೀರುತ್ತಿದ್ದ) ಗಿಡಗಳಿಗೆ ವೃಕ್ಷಾದಾಸಿ ಎಂತಲೂ, ಕೇವಲ ಆಶ್ರಯವನ್ನು ಮಾತ್ರ ಪಡೆಯುತ್ತಿದ್ದ ಸಸ್ಯಗಳಿಗೆ ವೃಕ್ಷರೂಹಗಳೆಂತಲೂ ಕರೆಯ ಲಾಗುತ್ತಿತ್ತು. ಭೂಮಿಯೊಳಗಣ ಕಾಂಡಗಳು ಮತ್ತು ಬೇರು ಗಳಿಗೆ ಕಂದಗಳು ಎಂದೂ, ಈ ಕಂದಗಳಲ್ಲಿ ಕೆಲವು ವಂಶಾಭಿವೃದ್ಧಿ ಮಾಡಬಲ್ಲವು ಎಂದೂ ತಿಳಿಸಿ, ಬಾಳೆ, ಈರುಳ್ಳಿ, ಬೆಳ್ಳುಳ್ಳಿ ಮುಂತಾದವುಗಳನ್ನು ಉದಾಹರಿಸಿದ್ದಾರೆ.

ಎಲೆಗಳನ್ನು ಪತ್ರಗಳೆಂತಲೂ, ಅವನ್ನು ಎತ್ತಿಹಿಡಿದಿರುವ ಕಾಂಡಕ್ಕೆ ಬೃಂತವೆಂದೂ, ಎಲೆಯ ತೊಟ್ಟಿಗೆ ಸ-ಬೃಂತ

ವೆಂತಲೂ ಕರೆಯಲಾಗಿದೆ. ಹೊಸ ಎಲೆಗಳಿಗೆ ಪಲ್ಲವ, ಕಿಸಲಯ ಗಳೆನ್ನಲಾಗಿದೆ. ಸರಳ ಎಲೆಯನ್ನು ಏಕಪತ್ರವೆಂದೂ, ಸಂಯುಕ್ತ ಎಲೆಗಳಾಗಿದ್ದು ಎರಡು, ಮೂರು ಅಥವಾ ಏಳು ಸೀಳಾಗಿ ಒಡೆದಿದ್ದರೆ, ಕ್ರಮವಾಗಿ ದ್ವಿಪತ್ರ, ತ್ರಿಪತ್ರ ಮತ್ತು ಸಪ್ತಪತ್ರಗಳೆಂದೂ ಕರೆದಿದ್ದಾರೆ. ಕುದುರೆ ಕಿವಿಯನ್ನು ಹೋಲುವ ಎಲೆಗಳನ್ನು ಅಶ್ವಪರ್ಣಕವೆಂದೂ, ಇಲಿ ಕಿವಿಯನ್ನು ಹೋಲುವ ಎಲೆಗಳನ್ನು ಮೂಷಿಕ ಪರ್ಣಗಳೆಂತಲೂ, ಕೋತಿ ಕಿವಿಯನ್ನು ಹೋಲುವ ಮುಳ್ಳು ಉತ್ತರಾಣಿಯನ್ನು ಕೀಶಪರ್ಣಿ ಎಂತಲೂ ಕರೆಯಲಾಗುತ್ತಿತ್ತು.

ಮನಸ್ಸನ್ನು ಉಲ್ಲಾಸಗೊಳಿಸುವುದರಿಂದ ಹೂವಿಗೆ ಸುಮನಸ ಎಂತಲೂ, ಅರಳಿದುದಕ್ಕೆ ಪುಷ್ಪ, ಗಿಡಗಳಿಂದ ಹುಟ್ಟಿದ ಕಾರಣದಿಂದ ಪ್ರಸೂನವೆಂದರು. ಇನ್ನೂ ಅಗಳದ ಮೊಗ್ಗಿಗೆ ಕಾಳಿಕ, ಫಲ ಬಿಡುವವುಗಳಿಗೆ ಕೋರಕ, ಆಗ ತಾನೇ ಅರಳುತ್ತಿ ರುವ ಪುಷ್ಪಗಳಿಗೆ ಕುಟ್ಮಲ, ಮುಕುಳವೆಂದೂ, ಪೂರ್ಣ ಅರಳಿ ದವುಗಳಿಗೆ ವಿಕಚ ಹಾಗೂ ಸ್ಫುಥವೆಂದೂ ಕರೆಯಲಾಗುತ್ತಿತ್ತು.

ಪುಷ್ಪಮಂಜರಿಯನ್ನು ಸ್ಥವಕ ಅಥವಾ ಗುಚ್ಛಕವೆಂದೂ, ಆನೆಯ ಸೊಂಡಿಲನ್ನು ಹೋಲುವ ಹೆಲಿಕಾಯಿಡ್ ಸೈಮ್‌ಗೆ ಶ್ರೀಹಸ್ತಿನಿಯೆಂದೂ, ಚಂಡು ಹೂವನ್ನು ಹೋಲುವ ಗಿಡಗಳ ಪುಷ್ಪಮಂಜರಿಗೆ ಛಾತ್ರುವೆಂತಲೂ, ಮಂಜರಿ ಮತ್ತು ತಾಯಿಗಿಡ ವನ್ನು ಬಂಧಿಸುವ ಕಾವಿಗೆ ಪ್ರಸವಬಂಧನವೆಂದೂ ಕರೆಯಲಾಗಿದೆ. ವಕ್ರವಾಗಿರುವ ಅಪ್‌ಸೆಣಜಿನ ಜಾತಿಯ ಹೂಗಳಿಗೆ ವಕ್ರಪುಷ್ಪ ವೆಂದೂ, ದಳಗಳಿಗೆ ಪುಷ್ಪದಳಗಳೆಂದೂ, ದಳಗಳ ಸಂಖ್ಯೆಗಳ

ಆಧಾರದ ಮೇಲೆ ಶತದಳ, ಸಹಸ್ರದಳಗಳೆಂದು ಕರೆದಿದ್ದಾರೆ. ವಂಶಾಭಿವೃದ್ಧಿ ಅಂಗಗಳನ್ನು ಗಂಡು ಮತ್ತು ಹೆಣ್ಣು ಎಂದು ವಿಂಗಡಿಸಿದ್ದರು. ಗಂಡು ವಂಶಾಭಿವೃದ್ಧಿ ಅಂಗಕ್ಕೆ ಕೇಸರವೆಂದೂ ಇದರಿಂದೊದಗುವ ಧೂಳಿಸಂಥ ವಸ್ತುವಿಗೆ ಕೇಸರರೇಣು ಅಥವಾ ಪರಾಗಗಳೆಂದೂ ಹೆಸರಿಟ್ಟಿದ್ದರು.

ಫಲವೆಂದರೆ ಹಿಂದಿನ ಕ್ರಿಯೆಗಳಿಂದ ಉಂಟಾದ ಉತ್ಪನ್ನ. ಹಸಿರು ಹಣ್ಣುಗಳಿಗೆ ಶಲತು, ಒಣ ಹಣ್ಣುಗಳಿಗೆ ವಾನ, ಕುಂಬಳ ಜಾತಿಯ ಕಾಯಿಗಳಿಗೆ ಕ್ಷಾರಕಗಳು, ಕೋಡುಗಳಿಗೆ ಶಮಿ, ಅವುಗಳೊಳಗಣ ಬೀಜಗಳಿಗೆ ಶಮೀಧಾನ್ಯ ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು.

ಬೀಜಕ್ಕೆ ವೀಜವೆನ್ನಲಾಗುತ್ತಿತ್ತು. ಈ ಬೀಜಗಳು ವೀಜ ಕೋಶವಲ್ಲಿ ರಕ್ಷಿಸಲ್ಪಟ್ಟಿವೆ ಹಾಗೂ ಅವುಗಳನ್ನು ಬೀಜಕವಚಗಳು ಎಂದೂ, ತಿರುಳನ್ನು ಸಸ್ಯ (ಭ್ರೂಣಾಹಾರ) ವೆಂದೂ. ಬೀಜದಳ (ಕಾಟಿಲೆಡನ್) ವನ್ನು ಬೀಜಪತ್ರವೆಂದೂ ಕರೆಯಲಾಗುತ್ತಿತ್ತು.

## ಸಸ್ಯಗಳ ರಚನೆ

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಮರವನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ ಹೊರ ಆವರಣ ( ತೊಗಟೆ ) ವನ್ನು ತ್ವಚೆ ಅಥವಾ ವಲ್ಕಲವೆಂದೂ, ಒಳಭಾಗವನ್ನು ಸಾರ ವೆಂದೂ, ಅದಕ್ಕೂ ಒಳಗಿರುವ ಭಾಗವನ್ನು ಮಜ್ಜವೆಂದೂ ಕರೆಯಲಾಗುತ್ತಿತ್ತು. ಈ ಗ್ರಂಥದಲ್ಲೇ ಮರವನ್ನು ಮಾನವನ ದೇಹಕ್ಕೆ ಹೋಲಿಸಲಾಗಿದೆ ರೋಮವನ್ನು ಎಲೆಗಳಿಗೆ, ಚರ್ಮ

ವನ್ನು ಹೊರತೊಗಟೆಗೆ ಹೋಲಿಸಿದ್ದಾರೆ. ಹೀಗೆಯೇ ಚರ್ಮಕ್ಕೆ ಹತ್ತಿರುವ ಮೆದುವಾದ ಊತಕಗಳನ್ನು ಶಕಾರಕಕ್ಕೂ, ನರಗಳನ್ನು ಎಳೆ ಎಳೆಯಾಗಿರುವ ನಾರಿಗೂ, ಮೂಳೆಯನ್ನು ಗಟ್ಟಿಯಾದ ವಸ್ತು ದಾರುವಿಗೂ ಹೋಲಿಸಿ ಮನುಷ್ಯ ಶರೀರದಲ್ಲಿ ಮುರಿದ ವಸ್ತುಗಳು ನೈಸರ್ಗಿಕವಾಗಿ ಗುಣಹೊಂದುವಂತೆ ಇವುಗಳೂ ಗುಣಹೊಂದುತ್ತವೆ ಎಂದು ಉಲ್ಲೇಖಿಸಲಾಗಿದೆ.

## ಶರೀರ ಕ್ರಿಯೆ

ಗುಣರತ್ನ ತನ್ನ ಸದ್ದರ್ಶನ ಸಮುಚ್ಚಯದಲ್ಲಿ ಗಿಡದ ಮೇಲೆ ಮಣ್ಣಿನ ಪ್ರಭಾವವನ್ನು ಹೀಗೆ ವರ್ಣಿಸಿದ್ದಾನೆ: ಮನುಷ್ಯನ ದೇಹ ತಾಯಿಯ ಹಾಲು ಆಹಾರ ಇತ್ಯಾದಿಗಳನ್ನು ಹೇಗೆ ಮೈಗೂಡಿಸಿಕೊಳ್ಳುತ್ತದೋ ಹಾಗೆಯೇ ಸಸ್ಯಗಳೂ ಸಹ ಭೂಮಿಯ ಪ್ರಕೃತಿಗನುಗುಣವಾಗಿ ತುಂಬಿಕೊಳ್ಳುತ್ತವೆ ಎಂದು ಹೇಳಿ ಮುಂದುವರೆಯುತ್ತ ಮನುಷ್ಯ ದೇಹವು ತಾನು ತೆಗೆದು ಕೊಳ್ಳುವ ಪೂರ್ಣ ಅಥವಾ ಅಪೂರ್ಣ ಆಹಾರವನ್ನವಲಂಬಿಸಿ ಹೇಗೆ ನಿರೋಗಿ ಅಥವಾ ರೋಗಪೀಡಿತವಾಗುತ್ತದೋ ಅಂತೆಯೇ ಗಿಡಗಳು ಸರಿಯಾದ ಅಥವಾ ಸರಿಯಿಲ್ಲದ ಆಹಾರವನ್ನು ಮೈದುಂಬಿಕೊಂಡು ಅದಕ್ಕನುಸಾರವಾಗಿ ಬೆಳೆಯುತ್ತವೆ ಅಥವಾ ಕೊಳೆಯುತ್ತವೆ. ಫಲವತ್ತಾದ ಭೂಮಿಯ ಮೇಲೆ ಎಲ್ಲ ಸಸ್ಯಗಳೂ ಬೆಳೆಯುವುದರಿಂದ ಅವುಗಳಿಗೆ ಉರ್ವರವೆಂದೂ ಏನೂ ಬೆಳೆಯದ ಭೂಮಿಗೆ ಊಷರವೆಂದೂ ಕರೆಯಲಾಗತಿತ್ತು.

ಸಸ್ಯಗಳು ನೀರನ್ನು ಬೇರುಗಳಿಂದ ಹೀರಿಕೊಳ್ಳುತ್ತವೆಂಬುದು ನಿರ್ವಿವಾದ. ಇದನ್ನೇ ಮಹಾಭಾರತದಲ್ಲಿ "ನಾವು

ಬಾಯಲ್ಲಿ ತಾವರೆ ಎಲೆಯ ತೊಟ್ಟನ್ನು ಕಚ್ಚಿ ನೀರನ್ನು ಹೇಗೆ ಹೀರಿಕೊಳ್ಳುತ್ತೇವೆಯೋ ಹಾಗೆಯೇ ಗಿಡಗಳು ಗಾಳಿಯ ಸಹಾಯದಿಂದ ಬೇರಿನ ಮೂಲಕ ನೀರಿನಂಥ ದ್ರಾವಣವನ್ನು ಹೀರಿಕೊಳ್ಳುತ್ತವೆ"ಎಂದು ಹೇಳಿದೆ. ಮಣ್ಣಿನಿಂದ ವಿವಿಧ ವಸ್ತುಗಳನ್ನು ಹೀಗೆ ಹೀರಿಕೊಂಡನಂತರ ದ್ರಾವಣರೂಪದ ಆಹಾರವನ್ನು ಅರಗಿಸಿಕೊಳ್ಳುವುದರಲ್ಲಿ ಅಗ್ನಿ (ಶಕ್ತಿ) ಮತ್ತು ಗಾಳಿ (ಇಂಗಾಲದ ಡೈ ಆಕ್ಸೈಡು) ಬಹಳ ನೆರವಾಗುತ್ತವೆ. ಈ ದ್ರಾವಣವನ್ನು ಪ್ಟೆಗೂಡಿಸಿಕೊಳ್ಳುವುದರಿಂದ ಸಸ್ಯಪ್ರಪಂಚವು ಅಭಿವೃದ್ಧಿಗೊಂಡು ಸುಂದರವಾಗುತ್ತದೆ. ಮೇಲಣ ಈ ವಿವರಣೆಯಲ್ಲಿ ಭೂಮಿಯಿಂದ ನೀರು ಮೇಲಕ್ಕೆ ಹೋಗಲು ಒಂದು ತೆರನಾದ ಹೀರುವ ಶಕ್ತಿ ( Suction Force ) ಬೇಕಾಗುತ್ತದೆ. ಈ ಶಕ್ತಿಯು ಎಲೆಗಳಲ್ಲಿ (ಬಾಷ್ಪ ವಿಸರ್ಜನೆಯಿಂದಾಗಿ) ವೃದ್ಧಿಹೊಂದುತ್ತದೆ, ಎಂಬುದರ ಪೂರ್ಣ ಅರಿವು ನಮ್ಮ ಪೂರ್ವಜರಿಗಿತ್ತು. ಅಗ್ನಿಯೆಂದರೆ, ಬೆಂಕಿ ಎಂದು ನಾವು ಗ್ರಹಿಸಿಕೊಳ್ಳಲಾಗುವುದಿಲ್ಲ, ಬದಲು ಸೂರ್ಯ ರಶ್ಮಿಯ ಶಕ್ತಿ ಎಂದೂ, ಗಾಳಿಯೆಂದರೆ ಇಂಗಾಲದ ಡೈಆಕ್ಸೈಡು ಎಂದೂ ನಾವು ಊಹಿಸಿಕೊಳ್ಳಬಹುದು. ಇಂದಿನ ವೈಜ್ಞಾನಿಕ ದೃಷ್ಟಿಯಿಂದ ನೋಡಿದಾಗ ಕಂಡುಬರುವ ಸೂಕ್ಷ್ಮ ವಸ್ತುಗಳು ನಮ್ಮ ಪೂರ್ವಜರು ಗ್ರಹಿಸಿದ್ದ ಸ್ಥೂಲರೂಪಗಳಿಂದ ಅಷ್ಟೇನೂ ಭಿನ್ನವಿಲ್ಲವೆಂದು ಕಾಣಬಹುದು.

## ಉಸಿರಾಟ

ಎಲ್ಲ ಜೀವಿಗಳಲ್ಲಿ ಕಾಣಬಹುದಾದ ಒಂದು ಮುಖ್ಯ ಕ್ರಿಯೆ. ಇದು ಕಣ್ಣಿಗೆ ಅಗೋಚರವಾದದ್ದರಿಂದ, ಈ ಕ್ರಿಯೆಯ ಬಗ್ಗೆ ಹೆಚ್ಚಿನ ಮಾಹಿತಿಗಳು ದೊರೆತಿಲ್ಲ. ಆದರೂ

ಮನುಸಂಹಿತೆಯಲ್ಲಿ "ರಾತ್ರಿಹೊತ್ತು ಯಾರೂ ಗಿಡದಡಿಯಲ್ಲಿ ಉಳಿದುಕೊಳ್ಳಬಾರದು (ಮಲಗಬಾರದು) ಅಥವಾ ಅದರ ಕೆಳಗೆ ಹೋಗಬಾರದು" ಎಂದು ಎಚ್ಚರಿಸಲಾಗಿದೆ. ಅಂದರೆ, ರಾತ್ರಿ ಹೊತ್ತು ಅನೇಕ ಮುಖ್ಯ ಶರೀರಕ್ರಿಯೆಗಳು ನಡೆಯುವಾಗ ಉತ್ಪತ್ತಿಯಾಗುವ ಇಂಗಾಲದ ಡೈ ಆಕ್ಸೈಡು ಮರಗಳ ಕೆಳಗೆ ನಡೆಯುವವರಿಗೆ ಹಾನಿಮಾಡುತ್ತದೆಂದು ಬಹುಶಃ ಅವರಿಗೆ ಗೊತ್ತಿತ್ತೇನೋ.

**ಚಲನೆ**

ಕೆಳಮಟ್ಟದ ಸಸ್ಯಗಳನ್ನು ಬಿಟ್ಟು ಮೇಲ್ಮಟ್ಟದ ಬಹುತೇಕ ಗಿಡಗಳು ಒಂದೆಡೆಯಿಂದ ಮತ್ತೊಂಡೆಡೆಗೆ ಚಲಿಸಲಾರವು. ಆದರೆ, ಅವುಗಳ ಅಂಗಗಳಲ್ಲಿ ಚಲನೆಯ ಶಕ್ತಿಯಿದ್ದೇ ಇದೆ. ಇಂಥ ಚಲನೆಯನ್ನು ಗ್ರಹಿಸಿದ ಗುಣರತ್ನನು ಮುಟ್ಟಿದರೆ ಮುನಿಯಂಥ ಕೆಲವು ಸಸ್ಯಗಳಲ್ಲಿ ಮುಟ್ಟಿದಾಕ್ಷಣ ಎಲೆಗಳು ಕುಗ್ಗುವಿಕೆ, ನಂತರ ವಿಸ್ತಾರವಾಗುವಿಕೆ, ಸೂರ್ಯ ಹುಟ್ಟಿದಾಗ ತಾವರೆಯ ಅರಳುವಿಕೆ ಮುಂತಾದವುಗಳನ್ನು ಉಲ್ಲೇಖಿಸಿದ್ದಾನೆ. ಹೀಗೆಯೇ ಉದಯನನು ಅವನ ಕಿರಣಾವಳಿ ಗ್ರಂಥದ ಪೃಥಿವಿ ನಿರೂಪಣಂ ಅಧ್ಯಾಯದಲ್ಲಿ ಜೀವದ ಮುಖ್ಯ ಗುಣಗಳಾದ ಹುಟ್ಟು, ವಿಶ್ರಾಂತಿ (ಸುಪ್ತಾವಸ್ಥೆ) ಅಥವಾ ನಿದ್ರೆ, ಸಾವು, ಬೇಕಾದವುಗಳೆಡೆಗೆ (ಉದಾಹರಣೆಗೆ : ಸಸ್ಯಗಳ ಕೊಂಬೆ, ರೆಂಬೆಗಳು ಬೆಳಕಿರುವೆಡೆಗೆ ಬಾಗುತ್ತವೆ, ಬೇರು ಭೂಮಿಯ ಕಡೆಗೆ ಮಾತ್ರ ಬೆಳೆಯಬಲ್ಲುದು) ಚಲಿಸುವುದು ಇತ್ಯಾದಿಗಳನ್ನು ಬರೆದಿದ್ದಾನೆ.

## ಬೆಳವಣಿಗೆ

ಸಸ್ಯಗಳು ಹುಟ್ಟುತ್ತವೆ, ಬೆಳೆಯುತ್ತವೆ, ತಮ್ಮಂತೆಯೇ ಇರುವ ಜೀವಿಗಳನ್ನು ಸೃಷ್ಟಿಸುತ್ತವೆ, ಅನಂತರ ಸಾಯುತ್ತವೆ. ಈ ನೈಸರ್ಗಿಕ ನಿಯಮಗಳನ್ನು ಗುರ್ತಿಸಿದ ಗುಣರತ್ನ ಮನುಷ್ಯನ ಮಗುರೂಪ, ಚಿಕ್ಕಹುಡುಗ, ಯುವಕ, ವೃದ್ಧಾಪ್ಯಗಳನ್ನು ಅನುಭವಿಸುವ ಕ್ರಿಯೆಗೆ ಹೋಲಿಸಿದ್ದಾನೆ. ಅಲ್ಲದೆ, ಸರಿಯಾದ ಅಥವಾ ಕೆಟ್ಟ ಆಹಾರ, ಉಚಿತ ಹಾಗೂ ಅನುಚಿತ ವಾತಾವರಣ ಗಳು ಸಸ್ಯದ ಗುಣಗಳ ಮೇಲೆ ಎಂಥ ಪರಿಣಾಮವನ್ನು ಬೀರು ತ್ತವೆ ಎಂದು ಗ್ರಹಿಸಿ ಬೆಳಗಿನ ಹೊತ್ತು ಬೆಳಕು, ರಾತ್ರಿ ಹೊತ್ತು ನೀರು, ಸಸ್ಯಗಳ ಶಕ್ತಿವರ್ಧನೆಗೆ ಸಹಾಯಮಾಡುತ್ತವೆ ಎಂದು ತಿಳಿಸಿದ್ದಾನೆ. ಆದರೆ ಪ್ರಖರ ಬಿಸಿಲು ಅಥವಾ ಗಾಢನೆರಳೂ ಸಹ ಸಸ್ಯದ ಮೇಲೆ ಹೇಗೆ ಪ್ರಭಾವ ಬೀರಬಲ್ಲವು ಎಂದು ಸುವರ್ಣಗೆಡ್ಡೆಯನ್ನು ಉದಹರಿಸಿದ್ದಾನೆ. ನೆರಳಿನಲ್ಲಿ ಬೆಳೆವ ಸುವರ್ಣಗೆಡ್ಡೆಯು ಗಾತ್ರದಲ್ಲಿ ಹೆಚ್ಚಿದ್ದರೂ ಅದನ್ನು ತಿಂದಾಗ ನಾಲಗೆಯಲ್ಲಿ ಕೆರೆತವನ್ನುಂಟುಮಾಡುತ್ತದೆ ಎಂದು ಸಸ್ಯಗಳ ಗುಣಮೌಲ್ಯಗಳ ಬಗ್ಗೆ ಚಿಂತಿಸಿದ್ದಾನೆ.

## ವಯಸ್ಸಾಗುವಿಕೆ ಮತ್ತು ಸಾವು

ಸಾವು ಯಾವುದೇ ಜೀವಿಯ ಜೀವಿತದ ಕೊನೆಯ ಘಟ್ಟ. ಇವುಗಳ ಬಗ್ಗೆ ಗುಣರತ್ನ ಬರೆಯುತ್ತಾ, ಕೆಲವು ಸಸ್ಯಗಳು ಹತ್ತು ಸಹಸ್ರವರ್ಷಗಳವರೆಗೂ ಬದುಕಬಲ್ಲವು ಎಂದು ಹೇಳಿರುವುದರ ಜೊತೆಗೆ ರೋಗ, ಮುಪ್ಪು ಮತ್ತು ಸಾವುಗಳು ಯೋಗ್ಯ ಅಥವಾ ಅಯೋಗ್ಯ ವಸ್ತುಗಳ ಶೇಖರಣೆಯಿಂದುಂಟಾ ಗುತ್ತದೆಂದು ತಿಳಿಸಿದ್ದಾನೆ.

## ಸಸ್ಯಗಳಲ್ಲಿ ಎಚ್ಚರಿಕೆ

ಸಸ್ಯಗಳಲ್ಲಿ ಜ್ಞಾನವಿದೆ, ಅವುಗಳೂ ಸಹ ಜ್ಞಾನವನ್ನು ಗ್ರಹಿಸಬಲ್ಲವು ಎಂದು ನಿಖರವಾಗಿ ತಿಳಿದಿದ್ದ ಪೂರ್ವಜರು ಅನೇಕ ಮರಗಳನ್ನು ವೃಕ್ಷದೇವತಾ ಎಂದು ಪೂಜಿಸುತ್ತಿದ್ದರು. ಇವರ ಜೊತೆಗೆ ಸಸ್ಯಗಳೊಡನೆ ಸಂಭಾಷಣೆಗಳನ್ನು ನಡೆಸುತ್ತಿದ್ದರು ಎಂದು ಋಗ್ವೇದವು ತಿಳಿಸುತ್ತದೆ. ಇತ್ತೀಚಿನ ವಿಜ್ಞಾನದ ಬೆಳವಣಿಗೆಗಳು, ಸಸ್ಯಗಳೂ ಸಹ ಹೆದರಿಕೊಳ್ಳಬಲ್ಲವು, ಸಂಗೀತ ಮುಂತಾದ ಶಬ್ದತರಂಗಗಳಿಗೆ ಒಲಿಯುಬಲ್ಲವು ಎಂಬುದು ಪ್ರಯೋಗಗಳ ಮೂಲಕ ಸ್ಥಿರಪಟ್ಟಿದೆ.

ಮಹಿದಾಸ ಆತ್ರೇಯನು ತನ್ನ ಐತರೇಯ ಅರಣ್ಯಕದಲ್ಲಿ ವಿಶ್ವದ ಜೀವಿಗಳಲ್ಲಿ ಪ್ರಾಣಿಗಳು ಮತ್ತು ಸಸ್ಯಗಳನ್ನು ಒಂದೇ ದೃಷ್ಟಿಯಿಂದ ನೋಡಿ, ಸಸ್ಯಗಳಲ್ಲಿ ಕೇವಲ ಜೀವವಿದೆ, ಅಷ್ಟೇ ಅಲ್ಲ ಪ್ರಾಣಿಗಳಂತೆ, ಚಿತ್ತವೂ ಸಹ ಇದೆ ಎಂದು ಹೇಳಿ ಎಲ್ಲ ಪ್ರಾಣಿಗಳಂತೆ ಬೆಳೆದ ಸಸ್ಯವೂ ಕೂಡ ಫಲಧಾರಿಯಾಗುತ್ತದೆ ಎಂದು ಹೇಳಿದ್ದಾನೆ. ಉದ್ದಾಲಕ, ಜೀವಿಗಳ ಕೇಂದ್ರವಾದ ಜೀವದ ಬಗ್ಗೆ ಬರೆಯುತ್ತಾ "ಒಂದು ಜೀವಿಗೆ ಭವ್ಯರೂಪವನ್ನು ನೀಡುವುದು ಅದರ ಚೈತನ್ಯ. ಚೈತನ್ಯವು ಸಸ್ಯ ಮತ್ತು ಪ್ರಾಣಿಗಳೆರಡರಲ್ಲಿಯೂ ಇರುತ್ತದೆ. ವೃಕ್ಷಗಳಲ್ಲಿನ ಚೈತನ್ಯವು ಒಂದು ಕೊಂಬೆಯನ್ನು ತ್ಯಜಿಸಿದರೆ ಅದು ಸಾಯುತ್ತದೆ ಮತ್ತೊಂದನ್ನು ತ್ಯಜಿಸಿದರೆ ಅದೂ ಕೂಡ ಸಾಯುಬೇಕು. ಮರವನ್ನು ಪೂರ್ಣವಾಗಿ ತ್ಯಜಿಸಿದರೆ ಒಣಗಿ ಸತ್ತು ಹೋಗುತ್ತದೆ. ಆದರೆ ಆ ಜೀವದ ಚೈತನ್ಯ (ಆತ್ಮ) ವೆಂದೂ ನಶಿಸದು" ಎಂದಿದ್ದಾನೆ. ಇದಕ್ಕೆ ಪೂರಕವಾಗಿ ಮನುಸಂಹಿತೆ

ಯಲ್ಲಿ ವೃಕ್ಷಗಳು ಅವುಗಳಲ್ಲಿರುವ ತಮೋಗುಣಗಳಿಂದ ಆ ರೂಪ ವನ್ನು ಪಡೆದಿವೆ ಆದರೆ ಅವುಗಳು ಸುಪ್ತ ಚೈತನ್ಯವನ್ನು ಹೊಂದಿರುವುದರಿಂದ ನೋವು ನಲಿವುಗಳನ್ನು ಅನುಭವಿಸುತ್ತವೆ ಎಂದು ಬರೆಯಲಾಗಿದೆ.

ಮಹಾಭಾರತದ ಶಾಂತಿ ಪರ್ವದಲ್ಲಿ ತುಂಬ ಸುಂದರವಾದ ಸಂಭಾಷಣೆ ಇದೆ. ಇದರಲ್ಲಿ ಭಾರದ್ವಾಜ, ಭೃಗುಮುನಿಯನ್ನು "ಓ ಬ್ರಾಹ್ಮಣ, ಚರ ಮತ್ತು ಅಚರ ದೇಹಿಗಳೆಲ್ಲವೂ ಪಂಚಭೂತ ಗಳಿಂದ ಮಾಡಲ್ಪಟ್ಟಿವೆಯೆಂದರೆ ಅಚರವಸ್ತುಗಳಲ್ಲಿ ಅವುಗಳಿಲ್ಲ ವೆಂದು ನಾವು ಏಕೆ ಗ್ರಹಿಸಬಾರದು ? ಗಿಡ ಬಳ್ಳಿಗಳು ನೋಡ ಲಾರವು, ಕೇಳಲಾರವು, ವಾಸನಾಗ್ರಹಣ ಶಕ್ತಿಯಿಲ್ಲ, ರುಚಿ ನೋಡಲಾರವು ಅಥವಾ ಮುಟ್ಟಲಾರವು. ಅವುಗಳಲ್ಲಿ ರಕ್ತ ದಂಥ ದ್ರವವಿಲ್ಲ, ಅಗ್ನಿ (ಶಕ್ತಿ) ವಸ್ತುಗಳಿಲ್ಲ, ಭೂಮಿ (ಮಣ್ಣು), ಮೂಳೆ ಮತ್ತು ಮಜ್ಜದ ರೂಪದಲ್ಲಿ ಪ್ರತಿನಿಧಿಸಲ್ಪಟ್ಟಿಲ್ಲ : ಚಲ ನೆಯಿಂದ ಅವುಗಳಲ್ಲಿ ಗಾಳಿಯಿದೆ (ಶ್ವಾಸೋಚ್ಛ್ವಾಸ) ಎನ್ನಲಾಗು ವುದಿಲ್ಲ, ಖಾಲಿ ಜಾಗವು ಆಕಾಶದಿಂದ ಪ್ರತಿನಿಧಿಸಲ್ಪಟ್ಟಿಲ್ಲ : ಹಾಗಾದರೆ ಸಸ್ಯಗಳು ಪಂಚಭೂತಗಳಿಂದಾಗಿವೆ ಎಂದು ಹೇಗೆ ಹೇಳಲು ಸಾಧ್ಯ ? " ಎಂದು ಕೇಳುತ್ತಾನೆ ?

ಭೃಗು ಹೇಳುತ್ತಾನೆ "ಓ ಬ್ರಾಹ್ಮಣ, ಸಸ್ಯಗಳು ಘನರೂಪ ದಲ್ಲಿರುವುದರಿಂದ ಅವುಗಳಲ್ಲಿ ಆಕಾಶವಿರುವುದನ್ನು ನಾವು ಗ್ರಹಿಸ ಲಾಗುವುದಿಲ್ಲ, ಅವುಗಳು ಬೀಸುವ ಹೂ ಹಣ್ಣುಗಳಿಂದ ಅವರ ಇರುವಿಕೆಯನ್ನು ಪತ್ತೆಮಾಡಬಹುದು. ಕೇವಲ ಶಾಖಕ್ಕೆ ಬಿದ್ದುಹೋಗುವ ಅವುಗಳ ತೊಗಟೆ, ಎಲೆ ಹೂ ಹಣ್ಣುಗಳಿಂದ ಅವುಗಳಿಗೆ ಮುಟ್ಟಿದರೆ ಜ್ಞಾನವಿದೆ ಎಂಬುನನ್ನು ಸಂಶಯಪಡ

ಲಾಗದು. ಬಿರುಗಾಳಿ, ಬೆಂಕಿ, ಸಿಡಿಲು ಮುಂತಾದವುಗಳ ಘೋರ್ಗರೆತದಿಂದ, ಹೂ ಹಣ್ಣುಗಳು ಉದುರಿಹೋಗುವುದರಿಂದ ಅವುಗಳಿಗೆ ಕೇಳುವ ಶಕ್ತಿಯಿದೆಯೆಂದು ತೀರ್ಮಾನಿಸಬಹುದು. ಕಣ್ಣಿಲ್ಲದ ಪ್ರಾಣಿಗಳು (ಮೇಲ್ಬರ್ಜೆಯ) ತಾವಾಗಿಯೇ ಚಲಿಸ ಲಾರವು. ಆದರೆ ಬಳ್ಳಿಗಳು ಮರಗಳ ಹತ್ತಿರ ಚಲಿಸಿ ತಮ್ಮ ಮನ ಬಂದಂತೆ ಅಡರಿಕೊಳ್ಳುತ್ತವೆ. ಆದ್ದರಿಂದ ಅವುಗಳಲ್ಲಿ ದೃಷ್ಟಿ ಯಿದೆಯೆಂದು ಒಪ್ಪಿಕೊಳ್ಳಬೇಕು. ಸುವಾಸನಾಯುಕ್ತ ಅಥವಾ ದುರ್ಗಂಧವಿರುವ ಕೆಲವು ವಸ್ತುಗಳನ್ನು ಹಚ್ಚುವುದರಿಂದ ರೋಗ ಗಳನ್ನು ಗುಣಪಡಿಸಬಹುದು. ಆದ್ದರಿಂದ ಅವುಗಳಿಗೆ ಪ್ರಜ್ಞೆ ಇದೆ. ಬೇರುಗಳಿಂದ ನೀರನ್ನು ಕುಡಿಯುವುದರಿಂದ ಅವುಗಳಿಗೆ ರುಚಿನೋಡುವ ಶಕ್ತಿಯಿದೆ. ತಾವರೆಯ ತೊಟ್ಟಿನಿಂದ ನಾವು ನೀರನ್ನು ಹೇಗೆ ಹೀರುತ್ತೇವೋ ಹಾಗೆಯೇ ಅವುಗಳೂ ಸಹ ನೀರನ್ನು ಕುಡಿಯುತ್ತವೆ ಮತ್ತು ನೋವುಸಲಿವುಗಳಿಗೆ ಸೂಕ್ಷ್ಮ ಮತಿಗಳಾಗಿರುತ್ತವೆ, ಹೊಡೆತದಿಂದ ಬಿದ್ದನಂತರ ಮತ್ತೆ ಹುಟ್ಟು ತ್ತವೆ (ಚಿಗುರುತ್ತವೆ ?) ಆದ್ದರಿಂದ ಅವುಗಳಲ್ಲಿ ಜೀವವಿದೆ ಎಂದು ಒಪ್ಪಿಕೊಳ್ಳಬೇಕು," ಎಂದು ತಾರ್ಕಿಕವಾಗಿ ನಿರೂಪಿಸಿದ್ದಾನೆ.

## ಲಿಂಗಬೇಧ

ಮನುಷ್ಯ ಮತ್ತು ಪ್ರಾಣಿಗಳಲ್ಲಿ ಲಿಂಗಗಳಿರುವಂತೆಯೇ ಸಸ್ಯಗಳಲ್ಲಿಯೂ ಇವೆ ಎಂದು ಪಾಶ್ಚಾತ್ಯ ವಿಜ್ಞಾನವಷ್ಟೇ ಹೇಳಿಲ್ಲ ನಮ್ಮ ಋಷಿಗಳು ಅವರ ಕೃತಿಗಳಲ್ಲಿ ಇವುಗಳ ಬಗ್ಗೆ ನಿಖರವಾಗಿ ಅಲ್ಲದಿದ್ದರೂ, ವೈಜ್ಞಾನಿಕವಾಗಿ ನಿರೂಪಿಸದಿದ್ದರೂ, ಅನುಭವ ರಮ್ಯವಾದ ಜ್ಞಾನವನ್ನು ಕಾವ್ಯರೂಪದಲ್ಲಿ ಬರೆದಿದ್ದಾರೆ.

ಹೀಗೆ ಬರೆಯುವಲ್ಲಿ ಮನುಷ್ಯನ ಉದಾಹರಣೆಯನ್ನು ತೆಗೆದು ಕೊಂಡು ಬರೆಯುವುದು ಅನಿವಾರ್ಯವಾಯಿತೆನೋ.

ಹರಿತ ಅತ್ರೇಯನನ್ನು ಕೇಳುತ್ತಾನೆ " ಓ ಮುನಿಯೇ ಸಂಯೋಗವಿಲ್ಲದೆ ಗರ್ಭದಾರಣೆಯಾಗುವುದಿಲ್ಲವೇ ? ಸಂಯೋಗ ವಿಲ್ಲದೆ ಹೂ ಹಣ್ಣುಗಳೇಕೆ ಉತ್ಪತ್ತಿಯಾಗಲರವು ? ಸಸ್ಯಗಳಲ್ಲಿ ಇರುವಂತೆಯೇ ಅದೇ ತೆರನಾದ ಫಲೋತ್ಪತ್ತಿ ಸ್ತ್ರೀಯಲ್ಲೇಕೆ ಆಗುವುದಿಲ್ಲ? ಈ ಪ್ರಶ್ನೆಗೆ ಅತ್ರೇಯ ಹೇಳುತ್ತಾನೆ " ಮಗು, ಚರ ಮತ್ತು ಅಚರ ಸಸ್ಯಗಳ ವಿಭಿನ್ನ ಲಿಂಗಗಳ ಸಹಕಾರದಿಂದ ಬೀಜೋತ್ಪತ್ತಿಯಾಗುತ್ತದೆ, ರೇತಸ್ಸಿನ ಮೇರೆಗೆ ಅದರ ಗುಣವೂ ಭಿನ್ನವಾಗುತ್ತದೆ. ಇದರ ಬಗ್ಗೆ ಭಿನ್ನಾಭಿಪ್ರಾಯವಿಲ್ಲ ಮಗು, ಚರ ಸಸ್ಯಗಳಲ್ಲಿ ಎಲ್ಲವೂ ಶಿವ ಮತ್ತು ಶಕ್ತಿಯಿಂದ ಅನುಗ್ರಹೀತ ವಾಗಿವೆ ಅಂದರೆ ಗಂಡು ಮತ್ತು ಹೆಣ್ಣು ಜನನ ಶಕ್ತಿಗಳು. ಇದನ್ನು ಅರಿ. ಸ್ಥಿರಗುಣವನ್ನು ಹೊಂದಿರುವುದಕ್ಕೆ ಶಿವ (ಗಂಡು) ಹಾಗೂ ಚಲನಾತ್ಮಕ ಶಕ್ತಿಯಿರುವ ಆ ವಿಶಾಲಾತ್ಮಕ್ಕೆ ಶಕ್ತಿ (ಹೆಣ್ಣು) ಇವುಗಳ ಸಂಯೋಗದಿಂದ ಗಂಡು ಮತ್ತು ಹೆಣ್ಣಿನ ಕ್ರಿಯೆಗಳು ಉತ್ಪತ್ತಿಯಾಗುತ್ತವೆ. ಮಾವಿನ ಹೂ, ಹಣ್ಣು ಮತ್ತು ಓಟೆ (ಅವರೊಳಗಿನ ಭ್ರೂಣ) ಇದೇ ರೀತಿ ಉತ್ಪಾದನಾ ಶಕ್ತಿಯುಳ್ಳ ಶುಕ್ರನಿಂದ ಅನುಗ್ರಹೀತವಾಗಿರುತ್ತವೆ". ಪ್ಲೈನಿ ಎಂಬ ವಿದೇಶಿಯು " ಗಿಡಗಳಲ್ಲಿ ಗಂಡು ಭಾಗವು ಒತ್ತಾಗಿ ಸೂಕ್ಮವಾಗಿರುತ್ತದೆ. ಆದರೆ ಹೆಣ್ಣು ಭಾಗವು ಬಹಳ ದೊಡ್ಡದು ಎಂದು ಭಾರತೀಯರು ನಮಗೆ ಹೇಳುತ್ತಾರೆ" ಎಂದಿದ್ದಾನೆ. ವನೌಷಧಿ ದರ್ಪಣದಲ್ಲಿ ಒಂದು ಕಡೆ ತಾಳೆಯಲ್ಲಿ ಎರಡು ಜಾತಿಗಳಿವೆ. ಗಂಡು ಮತ್ತು ಹೆಣ್ಣು. ಇವುಗಳನ್ನು

ಕ್ರಮವಾಗಿ ಸೀತಕೇತಕಿ ಮತ್ತು ಸ್ವರ್ಣಕೇತಕಿ ಎಂದೂ ಕರೆದಿದ್ದಾರೆ. ರಾಜನಿಘಂಟುವಿನಲ್ಲಿ ಸೀತಕೇತಕಿಯು ಫಲ ಬಿಡದೆ ಧೂಳಿಪುಷ್ಪಿಕ (ಧೂಳಿನಿಂದಾವೃತವಾದ ಪುಷ್ಪಗಳು ಪರಾಗಗಳು) ವೆಂದೂ, ಸ್ವರ್ಣಕೇತಕಿಯನ್ನು ಸುವಾಸನಾಯುಕ್ತ ಸ್ವರ್ಣ ಬೆಳಸನ್ನು ನೀಡುವ 'ಕನಕ ಪ್ರಸವ' ವೆಂತಲೂ ಕರೆದಿದ್ದಾರೆ.

## ವಂಶಾಭಿವೃದ್ಧಿ

ಸಸ್ಯಗಳಲ್ಲಿ ವಂಶಾಭಿವೃದ್ಧಿಯು ಎರಡು ರೀತಿಗಳಿಂದ ನಡೆಯುತ್ತದೆ ; ಲಿಂಗರೀತಿಯ ಮತ್ತು ನಿರ್ಲಿಂಗರೀತಿಯ ವಂಶಾಭಿವೃದ್ಧಿ. ಬೀಜ, ಲಿಂಗರೀತಿಯನ್ನು ಪ್ರತಿನಿಧಿಸಿದರೆ, ಕಾಂಡದ ಚೂರು, ಎಲೆ, ಬೇರು ಇತ್ಯಾದಿಗಳು ನಿರ್ಲಿಂಗರೀತಿಯನ್ನು ಸೂಚಿಸುತ್ತವೆ. ಬೀಜಗಳಿಂದ ಮತ್ತು ಫಲಗಳಿಂದ ಆಗುವ ವಂಶಾಭಿವೃದ್ಧಿಗೆ 'ಬೀಜಾರುಹ' ವೆಂದೂ, ಬೇರುಗಳಿಗೆ 'ಮೂಲಜ' ; ಕತ್ತರಿಸಿದವುಗಳಿಗೆ 'ಸ್ಕಂದಜ'; ಕಾಂಡದ ತುದಿಗಳಿಗೆ 'ಅಗ್ರವೀಜ'; ಎಲೆಗಳಿಗೆ 'ಪರ್ಣಯೋನಿ' ಎಂದು ಋಗ್ವೇದ, ಅಥರ್ವಣವೇದ ಮತ್ತು ಮನುಸಂಹಿತೆಗಳಲ್ಲಿ ಉಲ್ಲೇಖಿಸಲಾಗಿದೆ. ಇಂಥ ವಿವಿಧ ಬೀಜಗಳನ್ನು ಹೇಗೆ ಬಿತ್ತಬೇಕು ? ಎಂಬುದರ ಬಗ್ಗೆ ಅರ್ಥಶಾಸ್ತ್ರದಲ್ಲಿ ಲಶುನ, ಗೆಡ್ಡೆ ಮುಂತಾದವುಗಳನ್ನು ಜೇನು ಮತ್ತು ಶುದ್ಧ ಬೆಣ್ಣೆಯಿಂದ ಸವರಿ ಬಿತ್ತಬೇಕು ಎಂದೂ, ಕಬ್ಬು ಮುತಾಂದವುಗಳ ಕತ್ತರಿಸಲ್ಪಟ್ಟ ತುಂಡುಗಳ ತುದಿಗಳನ್ನು ಜೇನು, ಬೆಣ್ಣೆ ಹಾಗೂ ಹಂದಿಯ ಕೊಬ್ಬುಗಳನ್ನು ಹಸುವಿನ ಸಗಣಿಯಲ್ಲಿ ಬೆರೆಸಿ ಸವರಿ ಅನಂತರ ನೆಡಬೇಕು. ಹಲಸು, ಅಶೋಕ, ಬಾಳೆ, ನೇರಳೆ. ದಾಳಿಂಬೆ, ದ್ರಾಕ್ಷಿ, ನಿಂಬೆ ಮುಂತಾದವುಗಳನ್ನು ಕತ್ತರಿಸಿ ಆ ಭಾಗವನ್ನು ಹಸುವಿನ ಸಗಣಿಯಿಂದ ಸವರಿ ನೆಡಬೇಕೆಂದು

ಹೇಳಿದ್ದಾರೆ. ಹಸುವಿನ ಸಗಣಿ ಮತ್ತು ಕೊಬ್ಬುಗಳನ್ನು ಕತ್ತರಿಸಿದ ಭಾಗಕ್ಕೆ ಸವರುತ್ತಿದ್ದುದು ಬಹುಶಃ ಕಾಂಡ ಅಥವಾ ಕತ್ತರಿಸಿದ ಸಸ್ಯಭಾಗಗಳಿಂದ ನೀರು ಆವಿಯಾಗಿಹೋಗಿ ಒಣಗದಿರಲಿ ಎಂಬ ಭಾವನೆಯಿಂದ ಇರಬಹುದು.

ಮರಗಳನ್ನು ಕಡಿದ ಮೇಲೆ ಅವುಗಳನ್ನು ಮತ್ತೆ ಬೆಳೆಸಲು, ಎರಡು ವಿಧಾನಗಳನ್ನು ಬೃಹತ್ ಸಂಹಿತೆಯಲ್ಲಿ ಹೇಳಲಾಗಿದೆ. ಬೊಡ್ಡೆಗೆ, ಕಡಿದ ಕೊಂಬೆಯೊಂದನ್ನು ಸಿಕ್ಕಿಸುವುದು. ಇದರಿಂದ ಕಡಿದ ಮರದ ಬೊಡ್ಡೆಗೂ, ಕೊಂಬೆಗೂ ಸಂಪರ್ಕವೇರ್ಪಡುತ್ತದೆ. ಇದೇರೀತಿ ಕಡಿದ ರೆಂಬೆಗೆ ಮತ್ತೊಂದು (ಅದೇ ಜಾತಿಯ ಮರದಿಂದ ತಂದ) ರೆಂಬೆಯನ್ನು ಹಚ್ಚುವುದರಿಂದ ಹೊಸ ರೆಂಬೆಯೊಂದು ವೃದ್ಧಿಯಾಗುತ್ತದೆ ತೋಟಗಾರಿಕೆ ಶಾಸ್ತ್ರದ ಪ್ರಕಾರ ಬೊಡ್ಡೆಗೆ ಸ್ಟಿಕ್ ಎಂದೂ ಕತ್ತರಿಸಿ ತಂದ ರೆಂಬೆಗೆ ಸೈಯಾನ್ ಎಂದೂ ಹೆಸರು.

ಕೊಂಬೆ, ರೆಂಬೆಗಳ ತುದಿಯಿಂದ ವಂಶಾಭಿವೃದ್ಧಿ ಮಾಡುವಿಕೆಗೆ ಅಗ್ರುವೀಜವೆಂದು ಹೆಸರು. ಬಾಳೆಯದೆಲೆಯನ್ನು ಇಂಥ ಬೀಜಗಳಿಂದ ಅಭಿವೃದ್ಧಿ ಮಾಡಲಾಗುತ್ತಿತ್ತು ಎಂದು ಹೇಳಲಾಗಿದೆ ಬ್ರೈಯೋಫಿಲಂ, ಬಿಗೋನಿಯಾ, ಸಾನ್‌ಸೇವೇರಿಯಾ ಮುಂತಾದವುಗಳನ್ನು ಎಲೆಗಳ ಚೂರುಗಳಿಂದ ಅಭಿವೃದ್ಧಿ ಪಡಿಸಲಾಗುತ್ತದೆ. ಇಂಥವುಗಳಿಗೆ ಪರ್ಣಯೋನಿಗಳೆಂದು ಹೆಸರು. ಕೆಲವು ಮರಗಳ ಉದ್ದವಾದ ರೆಂಬೆಗಳನ್ನು ನೆಲಕ್ಕೆ ಬಾಗಿಸಿ, ಅವುಗಳಿಂದ ಹೊಸ ಮರ ಅಥವಾ ಗಿಡಗಳನ್ನು ಬೆಳೆಸುತ್ತಿದ್ದರು. ಇದಕ್ಕೆ ಲೇಯರಿಂಗ್ ಎನ್ನಲಾಗುತ್ತದೆ. ಹೀಗೆ ವಿವಿಧ ರೀತಿಯಿಂದ ವಂಶಾಭಿವೃದ್ಧಿಗೊಳ್ಳುವ ಸಸ್ಯಗಳನ್ನು ಬುದ್ಧ ಘೋಷ

ನಮೂದಿಸಿದ್ದಾನೆ. ಅರಿಶಿನ, ಶುಂಠಿ ಬಜೆ ಮುಂತಾದವುಗಳು ಮೂಲ ಬೀಜ (ಬೇರು=ಗುಪ್ತಕಾಂಡ) ದಿಂದಲೂ, ಆಲ, ಅರಳಿ ಮುಂತಾದವುಗಳು ಕಂದಬೀಜಗಳಿಂದಲೂ ಹುಲ್ಲು ಜಾತಿಯ ಅನೇಕ ಗಿಡಗಳು ಫಲುಬೀಜ (ಗಿಣ್ಣು) ಗಳಿಂದಲೂ, ಮೊಗ್ಗೆಗಳಿಂದ ವಂಶಾಭಿವೃದ್ಧಿ ಆಗುವ ಕೆಲಸಸ್ಯಗಳು, ಬೀಜಗಳಿಂದ ಅನೇಕ ಧಾನ್ಯಗಳು, ಜೋಳಿಗಳು, ಕುಂಬಳ ಇತ್ಯಾದಿ ಸಹ ತಮ್ಮದೇ ಆದ ವೈಶಿಷ್ಟ್ಯತೆಯಲ್ಲಿ ವಂಶಾಭಿವೃದ್ಧಿ ಮಾಡುತ್ತವೆಂದು ಹೇಳಿದ್ದಾನೆ.

## ಸಸ್ಯ ಸಂಬಂಧ

ಸಸ್ಯಗಳು ಒಂದೊಂದಕ್ಕೂ ಹೊಂದಿಕೊಂಡಿವೆ. ಇದೇ ರೀತಿ ಕೆಲವು ಪ್ರದೇಶಗಳಲ್ಲಿ ಕೆಲವು ನಿರ್ದಿಷ್ಟ ಸಸ್ಯಗಳಿರುವುದನ್ನು ಕಾಣಬಹುದು. ಅಂದರೆ, ಪ್ರದೇಶಗಳಿಗೂ ಸಸ್ಯಗಳಿಗೂ ನೇರ ಸಂಬಂಧವಿದೆಯೆಂದಾಯಿತು. ಪ್ರದೇಶಗಳಲ್ಲಿ ಪ್ರಮುಖವಾಗಿದ್ದ ಗಿಡಗಳ ಆಧಾರದ ಮೇಲೆ ಭೂಭಾಗಗಳನ್ನು ವಿಂಗಡಿಸಿರುವ ಉದಾಹರಣೆಗಳನ್ನು ನೋಡಬಹುದು. ಬಿಳಿ ಲಿಲ್ಲಿಗಳು ಹೆಚ್ಚಾಗಿರುವ ಪ್ರದೇಶಗಳಿಗೆ ಕುಮುದಿನಿ ಮತ್ತು ಕುಮುದ್ವತಿಯೆಂದೂ, ತಾವರೆಯಿಂದಾವೃತ ಪ್ರದೇಶಗಳಿಗೆ ಪದ್ಮಿನಿ ಮತ್ತು ನಳಿನಿಯೆಂದೂ, ಜೊಂಡುಗಳಿರುವ ಪ್ರದೇಶಗಳಿಗೆ ನದ್ವತ ಮತ್ತು ನದ್ವಲವೆಂದೂ ವಾಟೆಕಡ್ಡಿಗಳಿರುವ ಪ್ರದೇಶಕ್ಕೆ ವೇತಸ್ವನ ಹಾಗೂ ಹಸಿರು ಹುಲ್ಲಿರುವ ಪ್ರದೇಶಗಳಿಗೆ ಶಾದ್ವಲವೆಂದೂ ಕರೆದಿದ್ದಾರೆ. ಇದೇ ರೀತಿ ಕೆಲವು ನದಿಗಳಿಗೇ ವಿಶಿಷ್ಟವಾಗಿರುವ ಪ್ರಭೇದಗಳ ಆಧಾರದ ಮೇಲೆ ನದಿಗಳಿಗೆ ಹೆಸರಿಟ್ಟಿದ್ದಾರೆ. ಶರಜೊಂಡು ಹೆಚ್ಚಿರುವ ಶರಾವತಿ, ಕಳೆ ತುಂಬಿದ್ದರೆ ಶರ್ಮ, ವಾಟೆಕಡ್ಡಿಗಳಿದ್ದರೆ ವೇತ್ರಾವತಿ ಇತ್ಯಾದಿ.

## ಸಸ್ಯ ವಿಂಗಡಣೆ

ಸಸ್ಯಗಳನ್ನರಿಯಲು ಅವುಗಳ ವಿಂಗಡಣೆ ಅತಿಮುಖ್ಯ. ವಿವಿಧ ಸಸ್ಯಗಳನ್ನು ಸುಲಭವಾಗಿ ಪತ್ತೆಹಚ್ಚಲು ನಮ್ಮ ಹಿಂದಿನವರು ಅನೇಕ ವಿಂಗಡಣೆಯ ಸೂತ್ರಗಳನ್ನು ನಿರೂಪಿಸಿದ್ದರು. ಇದನ್ನರಿತು ಭಾರತದಲ್ಲಿ ಏಷ್ಯಾಟಿಕ್ ಸೊಸೈಟಿಯ ಸ್ಥಾಪಕರಾದ ಸರ್ ವಿಲಿಯಂ ಜೋನ್ಸ್‌ರವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. "ಭಾರತೀಯ ಸಸ್ಯಗಳಿಗೆ ಅವುಗಳ ನಿಜವಾದ ಹೆಸರುಗಳನ್ನು ನೀಡಲು ನಾನು ಸಂತೋಷಿಸುತ್ತೇನೆ ಕಾರಣ ಈ ದೇಶದ ಪ್ರೌಢ ಹಾಗೂ ಪ್ರಾಚೀನ ಭಾಷೆಯನ್ನು ಲಿನ್ನೇಯಸ್‌ನು ಅರಿತಿದ್ದ ಪಕ್ಷಕ್ಕೆ. ಅವುಗಳನ್ನು ಆತನೂ ಸಹ ಅಳವಡಿಸಿಕೊಳ್ಳು ತ್ತಿದ್ದನೆಂದು ನನಗೆ ಪೂರ್ಣ ಭರವಸೆಯಿದೆ".

ಗಿಡಗಳನ್ನು ಮೂರು ವಿಶಿಷ್ಟ ತತ್ವಗಳ ಆಧಾರದ ಮೇಲೆ ನಿರೂಪಿಸಿದ್ದಾರೆ.

ಸಸ್ಯಶಾಸ್ತ್ರಕ್ಕನುಗುಣವಾಗಿ ವಿಂಗಡಿಸುವುದಕ್ಕೆ 'ಉದ್ಭಿದ' ವೆಂತಲೂ, ಔಷಧೀಯ ಉಪಯೋಗಗಳ ಆಧಾರದ ಮೇಲೆ ವಿಂಗಡಿಸಿರುವವುಗಳಿಗೆ 'ವಿರೇಚನಾ'ದಿಗಳೆಂದೂ, ಆಹಾರ ವಸ್ತುವನ್ನಾಗಿ ಬಳಸಿದವುಗಳಿಗೆ 'ಅನ್ನಪಾನಾ'ದಿಗಳೆಂದೂ, ಹೆಸರಿಸಿದ್ದಾರೆ.

ಸಸ್ಯಗಳ ಎತ್ತರ ಹಾಗೂ ಫಲ ಬಿಡುವ ಆಧಾರದ ಮೇಲೆ ಮೂಲಿಕೆ, ಪೊದೆ ಹಾಗೂ ಮರ, ಫಲವೀಯುವ ಮತ್ತು ಫಲ ರಹಿತ ಸಸ್ಯಗಳೆಂದೂ ಕರೆಯಲಾಗುತ್ತಿತ್ತು. ಮನುಸಂಹಿತೆಯಲ್ಲಿ

ಒಂದು ವರ್ಷದ ನಿರ್ದಿಷ್ಟ ಋತುವಿನಲ್ಲಿ ಹೂ ಹಣ್ಣುಗಳನ್ನು ಬಿಟ್ಟು ಸತ್ತು ಹೋಗುವ ಭತ್ತ, ಗೋಧಿ ಮುಂತಾದ ಸಸ್ಯಗಳಿಗೆ ಔಷಧೀಯಗಳೆಂದೂ, ಎದ್ದು ಕಾಣುವ ಹೂಗಳನ್ನು ಬಿಡದೆ ಕೇವಲ ಫಲ ನೀಡುವ (ಆಲ, ಅರಳಿ) ವೃಕ್ಷಗಳಿಗೆ ವನಸ್ಪತಿ ಗಳೆಂದೂ, ಪೂರ್ಣವಾಗಿ ಹೂ ಅಥವಾ ಹಣ್ಣುಗಳನ್ನು ಬಿಡುವವು ಗಳಿಗೆ ವೃಕ್ಷಗಳೆಂದೂ, ಮಲ್ಲಿಗೆಯಂಥ ಲತೆಗಳಿಗೆ ಗುಚ್ಛೇಹಗಳೆಂದೂ ವಿವಿಧ ರಸಾವೃತ ಪೊದೆಗಳಿಗೆ ಗುಲ್ಮಗಳೆಂತಲೂ, ಹುಲ್ಲುಗಳಿಗೆ ತೃಣ, ನೆಲದ ಮೇಲೆ ಹರಡುವಂಥವುಗಳಿಗೆ ಪ್ರತಾಣ, ಆಶ್ರಯ ಕ್ಕಾಗಿ ಮರಗಳನ್ನು ಸುತ್ತುವರಿಯುತ್ತಿದ್ದಗಿಡಗಳಿಗೆ ಬಳ್ಳಿಗಳೆಂದೂ ಕರೆಯಲಾಗಿದೆ.

ಪುಷ್ಪವಿಲ್ಲದೆ ಕೇವಲ ಫಲಬಿಡುವ ಮರಗಳನ್ನು ವನಸ್ಪತಿ ಗಳೆಂದೂ, ಮೊದಲು ಹೂ ಬಿಟ್ಟು ನಂತರ ಫಲಬಿಟ್ಟ ಮರಗಳನ್ನು ವೃಕ್ಷಗಳೆಂದೂ, ಫಲಬಿಟ್ಟ ನಂತರ ಬಿದ್ದು ಸತ್ತು ಹೋಗುವ ಮೂಲಿಕೆಗಳನ್ನು ಔಷಧಿಗಳೆಂದೂ, ನೆಲದಮೇಲೆ ಹರಡುವ ಕಾಂಡ ಗಳಿರುವ ಬಳ್ಳಿಗಳನ್ನು ವಿರುಧಗಳೆಂಬ ನಾಲ್ಕು ಗುಂಪುಗಳಾಗಿ ಚರಕ ವಿಂಗಡಿಸಿದ್ದಾನೆ ಇದೇ ರೀತಿಯಲ್ಲಿ ಅಮರ ಕೋಶ ಮುಂತಾದ ವುಗಳಲ್ಲಿ ಹೂ ಬಿಡುವುದು, ಅವುಗಳಗಾತ್ರ, ಫಲ ಬಿಡುವಿಕೆ, ಮತ್ತವುಗಳ ಉದುರುವಿಕೆ ಮುಂತಾದವುಗಳ ಆಧಾರದ ಮೇಲೆ ಸಸ್ಯಗಳನ್ನು ವಿಂಗಡಿಸಲಾಗಿದೆ. ಅಲ್ಲದೆ, ಸಸ್ಯಗಳಲ್ಲಿ ಕಂಡು ಬರುವ ಕೆಲ ವಿಶಿಷ್ಟ ಗುಣಗಳ ಆಧಾರದ ಮೇಲೂ ಸಹ ಸಸ್ಯ ವಿಂಗಡಣೆ ಮಾಡಿರುವುದನ್ನು ನಾವು ನೋಡಬಹುದು. ಉದಾ ಹರಣೆಗೆ : ಸಮಾನಾಂತರ ನಾಳಗಳು ಮತ್ತು ಗಂಟುಗಂಟಾದ ಕಾಂಡವಿರುವಿಕೆಯು ಹುಲ್ಲುಗಳ ಮುಖ್ಯವಾದ ಗುಣ ವೈಶಿಷ್ಟ್ಯ.

ಇಂಥಹವುಗಳನ್ನು ಹುಲ್ಲು ಎಂದು ಕರೆದು, ಬಿದಿರು ಮತ್ತು ದೊಡ್ಡ ಜೊಂಡುಗಳನ್ನು ದೈತ್ಯ ಹುಲ್ಲುಗಳೆಂದು ಪರಿಗಣಿಸಿದ್ದರು. ಅಂದಿನಕಾಲದಲ್ಲಿ ತೆಂಗು, ಅಡಿಕೆ, ಖರ್ಜೂರ ಮುಂತಾದವುಗಳನ್ನು ಈ ಆಧಾರದ ಮೇಲೆಯೇ ಹುಲ್ಲಿನ ಗುಂಪಿಗೆ ಸೇರಿಸಿದ್ದರೂ ಸಹ ಈ ಮರಗಳು ಏಕದಳ ಸಸ್ಯಗಳ ಗುಂಪಿನಲ್ಲಿ ಬರುತ್ತವೆಂಬುವನ್ನು ನಾವು ಗಮನಿಸಬೇಕಾಗುತ್ತದೆ.

ಸಸ್ಯಗಳ ಹೂವಿನ ಬಣ್ಣ, ಆಕಾರ, ಮುಂತಾದ ವಿಶಿಷ್ಟ ಗುಣಗಳಿಂದ ವಿವಿಧ ಜಾತಿಗಳಾಗಿ ವಿಂಗಡಿಸಿದ್ದರು. ಉದಾಹರಣೆಗೆ : ಕೋವಿದಾರ ಅಥವಾ ಮಂದಾರ (Bauhinia) ದ ಹೂಗಳ ಬಣ್ಣದ ಆಧಾರದ ಮೇಲೆ ಶ್ವೇತಪತ್ರ ಕೋವಿದಾರ, ಪೀತಪತ್ರ ಕೋವಿದಾರ, ರಕ್ತ ಪುಷ್ಪ ಕೋವಿದಾರವೆಂದು ವಿಂಗಡಿಸಲಾಗಿತ್ತು. ಶ್ವೇತಪತ್ರ ಕೋವಿದಾರದಲ್ಲೇ ಅವರ ಹೂಗಳ ವಾಸನೆಯ ಆಧಾರದ ಮೇಲೆ ಶ್ವೇತಕೋವಿದಾರ ನಿರ್ಗಂಧ ಹಾಗೂ ಶ್ವೇತಕೋವಿದಾರ ಸುರಭಿಕುಸುಮವೆಂದು ವಿಂಗಡಿಸಿದ್ದರು. ಹೀಗೆಯೇ ಸಿಗುರು (ನುಗ್ಗೆ) ಮರದಲ್ಲಿ ಮೂರು ವಿಧಗಳಿವೆ. ಬಿಳಿಹೂಗಳನ್ನು ಬಿಡುವವುಗಳಿಗೆ ಶ್ವೇತ ಸಿಗುರುಗಳೆಂದೂ, ಕೆಂಪುಪುಷ್ಪಗಳಿರುವವುಗಳಿಗೆ ರಕ್ತ ಅಥವಾ ಮಧು ಸಿಗುರು ಎಂದು, ನೀಲಿಯಹೂಗಳಿದ್ದರೆ ಸೋವಂಜನವೆಂದೂ ಕರೆಯುತ್ತಿದ್ದರು ಶರಪುಂಖ (Teprosia) ದಲ್ಲಿ ಕೆಂಪು ಹೂಗಳಿಗೆ ರಕ್ತಶರಪುಂಖ, ಬಿಳಿಹೂಗಳಿಗೆ ಸೀತಶರಪುಂಖವೆಂದೂ, ಶ್ರೀಗಂಧದಲ್ಲಿ ಶ್ವೇತಚಂದನ ರಕ್ತಚಂದನ ಹಾಗೂ ಹರಿಚಂದನಗಳೆಂಬ ಜಾತಿಗಳಿವೆಯೆಂದು ವಿಂಗಡಿಸಿದ್ದಾರೆ.

ವೈಯಕ್ತಿಕೀಯಗುಣಗಳ ಆಧಾರದ ಮೇಲೆ ಸಸ್ಯಗಳನ್ನು ಚರಕ, ಸುಶ್ರುತ ಮುಂತಾದವರು ವಿವಿಧ ವರ್ಗಗಳಾಗಿ ವಿಂಗಡಿಸಿದ್ದಾರೆ. ಉದಾಹರಣೆಗೆ, ಜೀವನದ ಅವಧಿಯನ್ನು ಹೆಚ್ಚಿಸುವವುಗಳಿಗೆ ಜೀವನೀಯಗಳು, ಮಲ, ಮೂತ್ರ ವಿಸರ್ಜನೆಯನ್ನು ಉತ್ತೇಜಿಸುವವುಗಳಿಗೆ ಭೇದನೀಯಗಳು, ಮುರಿದ ಮೂಳೆ ಭಾಗಗಳನ್ನು ಸೇರಿಸುವವುಗಳಿಗೆ ಸಂಧನೀಯಗಳು, ಹಸಿವನ್ನು ಹೆಚ್ಚಿಸುವವುಗಳಿಗೆ ದೀಪನೀಯಗಳು, ಬಲ್ಯ, ವರ್ಣ್ಯ, ಕಾಂತ್ಯ, ಹೃದ್ಯಗಳು ಕ್ರಮವಾಗಿ ಶಕ್ತಿ, ವರ್ಣ, ಧ್ವನಿ, ಸಂತೋಷಗಳನ್ನು ಹೆಚ್ಚಿಸುತ್ತವೆ. ಹೀಗೆಯೇ ವಿವಿಧ ರೋಗಗಳನ್ನು ನಾಶಮಾಡಬಲ್ಲ ಶಕ್ತಿಯ ಮೇಲೆ ಗಿಡಗಳನ್ನು ವರ್ಗೀಕರಿಸಿದ್ದರು. ಚರಕನು ಇಂಥ ಹತ್ತು ವರ್ಗಗಳನ್ನು ಗುರುತಿಸಿದ್ದರೆ, ಸುಶ್ರುತನು ವಾತ, ಪಿತ್ತ, ಕಫ, ಮೂತ್ರ ಜಂತು ಮುಂತಾದವುಗಳಿಗೆ ಸಂಬಂಧಿಸಿದ ರೋಗಗಳನ್ನು ಗುಣಪಡಿಸುವ ಗಿಡಗಳನ್ನು 37 ಭಾಗಗಳು ಅಥವಾ ಗಣಗಳೆಂದು ವಿಭಾಗಿಸಿದ್ದಾನೆ.

ಆಹಾರಕ್ಕೆ ಹೇಗೆ ಉಪಯೋಗಿಸಬಹುದು ಎಂಬ ಆಧಾರದ ಮೇಲೆ ಚರಕ, ಸಸ್ಯಗಳನ್ನು ಆರು ವರ್ಗಗಳಾಗಿ ವಿಂಗಡಿಸಿದ್ದಾನೆ. ಮುಳ್ಳುಅಥವ ಊಬಿರುವ ಧಾನ್ಯಗಳಿಗೆ ಶೂಕಧಾನ್ಯವರ್ಗವೆಂದೂ ಬೇಳೆ ಧಾನ್ಯಗಳನ್ನು ಶಮಿ-ಧಾನ್ಯವರ್ಗಕ್ಕೂ, ಕುಂಡಗಳಲ್ಲಿ ಬೆಳೆಯಬಹುದಾದಂಥವುಗಳಿಗೆ ಶಾಖ ವರ್ಗವೆಂದೂ, ಹಣ್ಣು ಬಿಡುವ ವೃಕ್ಷಗಳನ್ನು ಫಲವರ್ಗವೆಂದೂ, ತರಕಾರಿಗಳನ್ನು ಹರಿತ ವರ್ಗವೆಂದೂ, ಎಣ್ಣೆಬೇಳೆಗಳಿಗೆ ಆಹಾರಯೋಗಿ ವರ್ಗವೆಂದೂ ವಿಂಗಡಿಸಿ ಪ್ರತಿ ವರ್ಗವನ್ನೂ ಮತ್ತೆ ವಿವಿಧ ಗುಂಪುಗಳಾಗಿ ವಿಂಗಡಿಸಿದ್ದಾನೆ.

ಇದೇ ರೀತಿ ಸುಶ್ರುತನೂ ಸಹ, ಶಾಲಿಧಾನ್ಯ, ಷಷ್ಟಿಕ, ವೃಹಿಧಾನ್ಯ, ಕುಧಾನ್ಯ, ವೈದಳ, ತಿಲ, ಯವ, ಸಿಂವ. ಫಲ, ಶಕ, ಪುಷ್ಪ, ಉದ್ಭಿದ, ಕಂದ ಮತ್ತು ತೈಲಗಳೆಂದು ವಿಂಗಡಿಸಿ ಪ್ರತಿಯೊಂದನ್ನೂ ವಿವರವಾಗಿ ಅವುಗಳ ಗುಣಲಕ್ಷಣಗಳ ಆಧಾರದ ಮೇಲೆ ವಿಂಗಡಿಸಿದ್ದಾನೆ.

## ಆನುವಂಶೀಯತೆ

ತಂದೆ, ತಾಯಂದಿರ ಗುಣಗಳು ಮಕ್ಕಳಿಗೆ ಹೇಗೆ ಬರುತ್ತವೆ ಎಂಬುದನ್ನು ತಿಳಿಸುವ ಶಾಸ್ತ್ರ ಆನುವಂಶೀಯ ಶಾಸ್ತ್ರ. ಈ ಶಾಸ್ತ್ರ ಕೇವಲ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮಾತ್ರ ಬೆಳೆಯಲಿಲ್ಲ ಆನುವಂಶೀಯತೆಯ ಬಗ್ಗೆ ಚರಕ ಮತ್ತು ಸುಶ್ರುತರು ಅವರಿಗಿದ್ದ ಜ್ಞಾನವನ್ನು ನಿಖರವಾಗಿ ಪ್ರತಿಪಾದಿಸಿದರು.

ಚರಕ ಹೇಳುತ್ತಾನೆ "ಮೊಳಕೆಯೊಡೆಯುತ್ತಿರುವ ಬಿದಿರಿನಲ್ಲಿ ಕುಬ್ಜ ಬಿದಿರು ಹೇಗಿರುತ್ತದೋ. ಮಾವು ಹಣ್ಣಾದಾಗ ಕಂಡು ಬರುವ ಸಿಪ್ಪೆ, ನಾರು, ಓಟೆಗಳು ಹೀಚಿನಲ್ಲಿ ಅವುಗಳ ಸೂಕ್ಷ್ಮತೆಯಿಂದಾಗಿ ಹೇಗೆ ಹುದುಗಿಕೊಂಡಿರುತ್ತದೋ ಹಾಗೆಯೇ ಗರ್ಭ ಅಥವಾ ಫಲಿತಗೊಂಡ ಅಂಡದಲ್ಲಿ ಪೂರ್ಣವಾಗಿ ಬೆಳೆದ ಮಾನವರ ಅಂಗಗಳು ಸೂಕ್ಷ್ಮರೀತಿಯಲ್ಲಿ ಅಡಗಿಕೊಂಡಿರುತ್ತವೆ". ಈ ದೃಷ್ಟಿಯು ಇಂದಿಗೆ ಹಾಗೂ ಮುಂದೆಯೂ ಸತ್ಯ, ನಿತ್ಯ ಸತ್ಯ. ತನ್ನ ವಿಚಾರವನ್ನು ಮುಂದುವರಿಸುತ್ತಾ ಅವನ ಶರೀರಾಸ್ಥಾನ ಗ್ರಂಥದಲ್ಲಿ ಹೀಗೆ ಹೇಳುತ್ತಾನೆ: "ಗಂಡು ಅಥವಾ ತಂದೆಯಿಂದ ದೊರೆತ ರೇತಸ್ಸು ಅವನ ಎಲ್ಲ ಭಾಗಗಳು ಅಥವಾ ಅಂಗಾಂಗಗಳಿಂದ ದೊರೆತ ಸೂಕ್ಷ್ಮ ವಸ್ತುಗಳನ್ನು ಹೊಂದಿರು

ತ್ತದೆ. ಮತ್ತು ಅದು ಎಲ್ಲ ಅಂಗಗಳ ಸೂಕ್ಷ್ಮರೂಪವನ್ನು ಪ್ರತಿನಿಧಿಸುತ್ತದೆ. ಇದರಿಂದ ಪೂರ್ಣವಾಗಿ ಅಭಿವೃದ್ಧಿಗೊಂಡ ಜೀವಿಯ ಸತ್ವವನ್ನು ಸೂಕ್ಷ್ಮ ಜೀವಿಯೇ ವೈಗೂಡಿಸಿಕೊಂಡಿರುತ್ತದೆ. ಇದನ್ನು ಡಾರ್ವಿನ್ನನ ಗೆಮ್ಯೂಲ್ (Gemnule) ಹಾಗೂ ಸ್ಪೆನ್ಸರ್‌ನ ಇಡ್ಸ್ ('Ids') ಗಳಿಗೆ ಹೋಲಿಸಬಹುದು. ಅಲ್ಲದೆ ಡಾರ್ವಿನ್ನನಿಗೂ ಹಿಂದಿದ್ದ ಜೀವವಿಜ್ಞಾನಿಗಳಲ್ಲಿ ಅನೇಕರು ವೀರ್ಯಾಣುಗಳಲ್ಲಿ ಚಿಕ್ಕಮಗುವಿನಾಕೃತಿಯಿದ್ದ ಚಿತ್ರಗಳನ್ನು ಬರೆದು ಪ್ರಚುರಪಡಿಸಿದ್ದರು.

ಈ ವಾದಕ್ಕಿಂತ ತುಂಬ ಪಾಂಡಿತ್ಯ ಪೂರ್ಣವಾದ ವಾದವೆಂದು ಹೇಳಬಹುದಾದರೆ ಅತ್ರೇಯನ ವಾದ. "ತಂದೆಯ ವಂಶಾಭಿವೃದ್ಧಿ ಅಂಗವು (ರೇತಸ್ಸು) ಅವನಲ್ಲಿ ಇರುವ ವಕ್ರತೆಗಳು ಅಥವಾ ಅವನ ಮೂಲಜರಲ್ಲಿದ್ದ ಬಾಹ್ಯ ವಕ್ರತೆಗಳಿಂದ ಮುಕ್ತವಾಗಿರುತ್ತದೆ. ಈ ಅಂಗದಿಂದ ಬಂದ ಬೀಜವು ಮಕ್ಕಳ ಶಾರೀರಕ ಕ್ರಿಯೆಗಳು ಮತ್ತು ಅವರ ಬೆಳವಣಿಗೆಯನ್ನು ನಿರ್ಧರಿಸುತ್ತದೆ". ಇದನ್ನು ನಾವು ವಿಸ್‌ಮನ್ನನ (Weissman) ಜರ್ಮ್‌ಪ್ಲಾಸಂ ( Germplasm ) ವಾದದೊಡನೆ ಹೋಲಿಸಬಹುದು. ಇಲ್ಲಿ ವಂಶಾಭಿವೃದ್ಧಿಗೆ ಕಾರಣೀಭೂತವಾಗಿರುವ ಅಂಗಾಂಶವೇ ಬೇರೆ. ಈ ಅಂಗಾಂಶದಿಂದ ಕುಡಿಯೊಡೆದು ಅಂಗಾಂಶವನ್ನೇ ರಕ್ಷಿಸುವಂಥ ಅಂಗಗಳೇ ಬೇರೆ ಎಂಬುದನ್ನು ಅವನು ನಿಖರವಾಗಿ ಹಾಗೂ ತಾರ್ಕಿಕವಾಗಿ ನಿರೂಪಿಸಿರುವುವನ್ನು ಮನಗಾಣಬಹುದು.

## ಇತರ ಉಪಯೋಗಗಳು

ಕೆಲವು ಸಸ್ಯಗಳ ಅಭಿವೃದ್ಧಿಯ ಆಧಾರದ ಮೇಲೆ, ಉಳಿದ ಸಸ್ಯಗಳ ಫಲಾಫಲಗಳು ಜನಜೀವನ ಮುಂತಾದವುಗಳನ್ನು ನಿರೀಕ್ಷಿಸಲಾಗುತ್ತಿತ್ತು. ಇಂಥ ಅನೇಕ ಉದಾಹರಣೆಗಳನ್ನು ಬೃಹತ್ ಸಂಹಿತೆಯಲ್ಲಿ ಹೇಳಿದೆ.

ಅಶೋಕ ವೃಕ್ಷದಲ್ಲಿ ವಿಪುಲವಾಗಿ ಹೂ ಬಿಟ್ಟರೆ ಕೆಂಪು ಛತ್ರವೂ, ಅರಳಿಮರದ ಸಮೃದ್ಧವಾದ ಹೂಗಳಿಂದ ಎಲ್ಲ ಧಾನ್ಯ ಗಳೂ, ಎಳ್ಳು ಮತ್ತು ಉದ್ದು; ನೇರಿಳೆಯಿಂದ ಗೋಧಿ: ಮಧುಕ ದಿಂದ ಹತ್ತಿ; ಅತಿ ಮುಕ್ತಕ ಮತ್ತು ಮಲ್ಲಿಗೆಯಿಂದ ಹುರುಳಿಯ ಸಮೃದ್ಧಿಯನ್ನು ನಿರೀಕ್ಷಿಸಬಹುದು.

ಶಂಖ, ಮುತ್ತು ಹಾಗೂ ಬೆಳ್ಳಿಯ ಸಮೃದ್ಧಿಯನ್ನು ಎಳ್ಳಿನ ಅಭಿವೃದ್ಧಿಯಿಂದಲೂ, ಆಡು ಕುರಿಗಳ ಹೆಚ್ಚುವರಿಯನ್ನು ಬಾಳೆಯ ಅಭಿವೃದ್ಧಿಯಿಂದಲೂ, ಚಿನ್ನದ ಸಮೃದ್ಧಿಯನ್ನು ಸಂಪಿಗೆಯ ಅಭಿವೃದ್ಧಿಯಿಂದಲೂ, ಕಲಾವಿದರು, ರಾಜರು, ಮಂತ್ರಿಗಳು ಹಾಗೂ ವ್ಯಾಪಾರಿಗಳ ಏಳ್ಗೆಯನ್ನು ಕ್ರಮವಾಗಿ ಕುಸುಬೆ, ಕೆಂದಾವರೆಗಳು, ವೈದಿಲೆಗಳು ಹಾಗೂ ಸುವರ್ಣ ಪುಷ್ಪದ ಅಭಿವೃದ್ಧಿಯಿಂದಲೂ, ಬ್ರಾಹ್ಮಣರು ಹಾಗೂ ಸೇನಾ ಪತಿಯ ಏಳ್ಗೆಯನ್ನು ತಾವರೆಗಳು ಹಾಗೂ ಸೌಗಂಧಿಕದ ಅಭಿವೃದ್ಧಿಯಿಂದಲೂ, ಚಿನ್ನದ ಹೆಚ್ಚುವರಿಯನ್ನು ಎಕ್ಕದ ಅಭಿವೃದ್ಧಿಯಿಂದಲೂ ಪತ್ತೆ ಹಚ್ಚಬಹುದು.

ಹೀಗೆಯೇ ಮಾವು ವಿಪುಲವಾಗಿ ಹೂ ಬಿಟ್ಟರೆ, ಸುಭಿಕ್ಷತೆ

ಯನ್ನೂ, ಅಡಕೆ ಹಾಗೂ ನೇರಳೆ ಜಾತಿಯ ಗಿಡಗಳಿಂದ ಕ್ಷಾಮ ವನ್ನೂ, ನಾಗಸಂಪಿಗೆಯಿಂದ ಸಮೃದ್ಧ ಬೆಳೆಯನ್ನೂ ಚೀಲದಿಂದ ಶುಭ್ರ ವಾತಾವರಣವನ್ನೂ, ಕಂಚುವಾಳದಿಂದ ಅಗ್ನಿಭಯವನ್ನೂ ಶ್ಯಾಮಲತೆಯ ಸೊಬಗಿನಿಂದ ಸೂಳೆಯರು ಹೆಚ್ಚಾಗುವುದನ್ನು ನಿರೀಕ್ಷಿಸಬಹುದು.

ಮರ, ಗುಲ್ಮ, ಲತೆಗಳು ಸ್ನಿಗ್ಧತೆಯಿಂದ ಸುಂದರ ವಾದಾಗ ಮತ್ತು ಅವುಗಳ ಎಲೆಗಳು ಒಡೆದಿರದೆ, ಪೂರ್ಣ ವಾಗಿದ್ದರೆ ಮಳೆಬರುವುದು ಖಂಡಿತ. ಆದರೆ, ಇವುಗಳು ಒಣಗಿ, ಅಸುಂದರವಾಗಿ, ಅನೇಕ ತೂತುಗಳು ಬಿದ್ದು ಹರಿದು ಹೋದಾಗ ಮುಂಬರುವ ನೀರಿನ ಅಭಾವ ಮತ್ತು ಶುಷ್ಕತೆ ಯನ್ನು ಸೂಚಿಸುತ್ತವೆ.

ಭೂಮಿಯಲ್ಲಿ ನೀರಿರುವ ಜಾಗಗಳನ್ನು ಗುರ್ತಿಸಲೂ ಸಹ ಸಸ್ಯಗಳು ಸಹಾಯಮಾಡಬಲ್ಲವು. ಉದಾಹರಣೆಗೆ : ನೀರಿಲ್ಲದ ಶುಷ್ಕ ಭೂಮಿಯಲ್ಲಿ ವೇತಸ ಗಿಡವು ಕಂಡು ಬಂದರೆ, ಅದರ ಪಶ್ಚಿಮಕ್ಕೆ ಮೂರು ಅಡಿಗಳ ದೂರದಲ್ಲಿ ಅರ್ಧ ಪುರುಷ ($3\frac{1}{2}$ ಅಡಿ) ಪ್ರಮಾಣದಲ್ಲಿ ನೀರು ಕಂಡು ಬರುತ್ತದೆ ಇಂಥ ಭೂಮಿಯಲ್ಲಿ ನೇರಳೆ ಮರವು ಕಂಡು ಬಂದಲ್ಲಿ ಅದರ ಉತ್ತರಕ್ಕೆ ಮೂರು ಅಡಿ ದೂರದಲ್ಲಿ ಎರಡು ಪುರುಷ ಪ್ರಮಾಣದ ಆಳದಲ್ಲಿ ನೀರಿನ ಸೆಲೆ ಕಂಡು ಬರುತ್ತದೆ.

ಹೀಗೆ ಅನೇಕ ಸಂಕೇತಗಳನ್ನು ಸಸ್ಯಗಳು ನೀಡುತ್ತವೆ ಎಂದು ಬೃಹತ್ ಸಂಹಿತೆಯಲ್ಲಿ ಬರೆಯಲಾಗಿದೆ.

## ಮಣ್ಣನ್ನು ಹದಗೊಳಿಸುವಿಕೆ

ಮಣ್ಣುಗಳ ಆಧಾರದ ಮೇಲೆ ಬೆಳೆಗಳನ್ನು ಬೆಳೆಯ ಬೇಕು; ಹಾಗಾದರೆ ಲಾಭಕರ. ಇದನ್ನು ಗಮನಿಸಿದ ಕಾಶ್ಯಪ ಐದು ಬಗೆಯ ಮಣ್ಣುಗಳನ್ನು ಗುರ್ತಿಸಿದ್ದಾನೆ: ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಬೆರಕೆ ಭೂಮಿಯನ್ನು ಚೆನ್ನಾಗಿ ಪರೀಕ್ಷಿಸಿದ ನಂತರ ಅದರ ಕೆಳಭಾಗ ಮತ್ತು ಮೇಲ್ಭಾಗದಲ್ಲಿ ಶುದ್ಧ ಜಲವಿರುವವುಗಳನ್ನೂ ಕಣ್ಣಿಗೆ ಸಮಾಧಾನಕರ ವರ್ಣವಿರುವವು, ಗೆದ್ದಲು ಮತ್ತು ಕೀಟ ಗಳಿಂದ ಮುಕ್ತವಿರುವವುಗಳನ್ನು ಆಯ್ಕೆ ಮಾಡಿಕೊಳ್ಳಬೇಕು. ಉಪಯುಕ್ತ ಪ್ರಾಣಿಗಳು ಹಕ್ಕಿಗಳಿರಬೇಕು, ಹಾಗೂ ಅದು ಬಿರುಗಾಳಿ, ಪ್ರವಾಹ ಅಥವಾ ಬೆಂಕಿಗಳಿಗೆ ಒಡ್ಡಲ್ಪಟ್ಟಿರ ಬಾರದು ಮೂಳೆ, ಕಲ್ಲು, ಬೇರುಗಳು ಮುಂತಾದವುಗಳಿಂದ ಮುಕ್ತವಿರಬೇಕು.

ಮಣ್ಣನ್ನು ಪರೀಕ್ಷಿಸುವವರು, ನೀರನ್ನು ಪತ್ತೆಹಚ್ಚು ವವರು, ಮತ್ತು ಕೃಷಿಕರು, ಅವರು ಬ್ರಾಹ್ಮಣರೇ ಆಗಲಿ, ಕ್ಷತ್ರಿಯರಾಗಲಿ, ವೈಶ್ಯ ಅಥವಾ ಶೂದ್ರರಾಗಲಿ ರಾಜನ ಆಜ್ಞೆಯ ಮೇರೆಗೆ ಭೂಮಿಯನ್ನು ಶುಭದಿನದಂದು ಪರಿಶೀಲಿಸ ಬೇಕು. ಜಲತಜ್ಞನು ಅವನನ್ನು ಶುದ್ಧೀಕರಿಸಿಕೊಂಡ ನಂತರ ಶುಭ್ರವಾದ ವಸ್ತ್ರಗಳನ್ನುಟ್ಟು, ಚಿನ್ನದುಂಗುರವನ್ನು ಧರಿಸಿ ವೇದಾಧ್ಯಯನ ಮಾಡಿದ ಬ್ರಾಹ್ಮಣರ ಜೊತೆಯಲ್ಲಿ ನಿರ್ದಿಷ್ಟ ಭೂಮಿಯ ಹತ್ತಿರ ಪ್ರಾತಃಕಾಲ ಅಥವಾ ಸಂಜೆ. ಶಂಖ ವಾದ್ಯ ಮಂತ್ರಘೋಷಣೆಗಳೊಡನೆ ಪಂಚಗವ್ಯ ಅಥವಾ

ಜಲಪ್ರೋಕ್ಷಣೆಯ ನಡುವೆ ನೆಲವನ್ನು ಪ್ರದಕ್ಷಿಣೆ ಮಾಡ ಬೇಕು. ಅನಂತರ, ಗುದ್ದಲಿ ಅಥವಾ ಪಿಕಾಸಿಯಿಂದ ನೆಲವನ್ನಗೆದು ಮಣ್ಣನ್ನು ಎತ್ತರಿಕೆಯಿಂದ ವಾಸನೆ, ರುಚಿ ಮೊದಲಾದುವುಗಳಿಗೆ ಪರಿಶೀಲಿಸಿ ಸ್ವಲ್ಪಭಾವವನ್ನು ನೀರು ತುಂಬಿದ ಕುಂಭದೊಳಕ್ಕೆ ಹಾಕಿ ಬಣ್ಣ ಮತ್ತು ಇತರ ವಸ್ತು ಗಳ ಬಗ್ಗೆ ಪರಿಶೀಲಿಸಬೇಕು.

ಸಮಾನ ವರ್ಣ, ರುಚಿ, ಧೃಢತೆ ಮತ್ತು ಸಯವಾಗಿ ರುವ ಮಣ್ಣು ದೇವತೆಗಳು, ರಾಜರು, ಋಷಿಗಳು, ಬ್ರಾಹ್ಮಣರು ಮತ್ತು ವೈಶ್ಯರಿಂದ ಅತ್ಯುತ್ತಮವಾದದ್ದೆಂದು ಗ್ರಹಿಸಲ್ಪಡುತ್ತದೆ. ಅದರ ಉತ್ತಮ ಗುಣಗಳಿಂದಾಗಿ ಜನತೆಯ ಸೌಖ್ಯ ಮತ್ತು ಅಭಿವೃದ್ಧಿ, ಸಂಸಾರದ ಆರೋಗ್ಯ, ಐಶ್ವರ್ಯ, ದನಕರುಗಳು ಮತ್ತು ಧಾನ್ಯ ಬೆಳೆಯುತ್ತದೆ ಎಂದು ಹೇಳಲಾಗಿದೆ.

ಭೂತಜ್ಞನು ಬೆಳೆ ಬೆಳೆಸಲು ಯಾವ ಭೂಮಿ ಒಳ್ಳೆ ಯದು, ಯಾವ ಭೂಮಿ ಕೆಟ್ಟದ್ದು, ಯಾವುದು ಮಧ್ಯಮ ಎಂದು ಹೇಳಬೇಕು. ಅನಂತರ ಬೆಳೆಗೆ ಯೋಗ್ಯವೇ ? ಹಾಗಾದರೆ ಯಾವುದು? ತೋಟಗಾರಿಕೆಗೇ? ಕಾಡುಬೆಳಸಿಗೆಗೋ? ಅಥವ ಕೆರೆ ಕಟ್ಟಲೋ? ಎಂದು ತೀರ್ಮಾನಿಸಿ ರಾಜನ ಅಪ್ಪಣೆಯ ಮೇರೆಗೆ ಜನಗಳಿಗೆ ತಿಳುವಳಿಕೆ ಹೇಳಬೇಕಾಗಿತ್ತು. ಚರಕ ಸಂಹಿತೆಯುಲ್ಲಿ ಭೂಮಿಯನ್ನು ವಾತಾವರಣ ಮತ್ತು ಭೂ ಲಕ್ಷಣಗಳಿಗನುಗುಣವಾಗಿ ಮೂರು ಭಾಗಗಳಾಗಿ ವಿಂಗಡಿಸ ಲಾಗಿದೆ: ಜಂಗಳ, ಅನೂಪ ಮತ್ತು ಸಾಧಾರಣ. ಜಂಗಳ ಪ್ರದೇಶದಲ್ಲಿ ಶುಷ್ಕ ಗಾಳಿ ಬೀಸುತ್ತದೆ. ನದಿ ತೊರೆಗಳು ಅಪರೂಪ, ಮರೀಚಿಕೆಗಳು ಸಾಮಾನ್ಯ. ಆದರೆ ಅನೂಪ

ಪ್ರದೇಶಗಳಲ್ಲಿ ವಿಪರೀತ ಶೈತ್ಯತೆಯಿದ್ದು ಶೀತಭರಿತ ಗಾಳಿ ಬೀಸುತ್ತಿರುತ್ತದೆ ಭೂಮಿಯು ದಟ್ಟ ಅರಣ್ಯಗಳು ಮತ್ತು ಸರೋವರಗಳಿಂದ ಕೂಡಿದ್ದು ಸಾಲು ಸಾಲು ಬೆಟ್ಟಗಳಿರುತ್ತವೆ. ಸಾಧಾರಣ ಪ್ರದೇಶವಲ್ಲಿ ಭೂಮಿ ಅತ್ಯಂತ ಫಲವತ್ತಾಗಿರದಿದ್ದರೂ ಅನೇಕ ಬಳ್ಳಿಗಳೂ ಸಸ್ಯಗಳೂ ಮತ್ತು ಮರಗಳೂ ಇರುತ್ತವೆಂದು ಹೇಳಲಾಗಿದೆ.

ಯಾವ ಯಾವ ಭಾಗಗಳಲ್ಲಿ ಎಷ್ಟೆಷ್ಟು ಮಳೆ ಬೀಳುತ್ತದೆ ಎಂಬ ಆಧಾರದ ಮೇಲೂ ಭೂಮಿಯನ್ನು ವಿಭಜಿಸಿದ್ದರು ಹಿಮಾಲಯದ ತಪ್ಪಲುಗಳಲ್ಲಿ ವಿಪರೀತ ಮಳೆ; ಅಲ್ಲಿ ಕಾಡುಗಳು ಹೆಚ್ಚು, ಅಲೆಗಳು ಅಪ್ಪಳಿಸುವ ಭೂಭಾಗಗಳಲ್ಲಿ ಬಳ್ಳಿ ಫಲಗಳನ್ನು ಬೆಳೆಯಬಹುದು. ನೀರಿನಿಂದಾವೃತವಾದ ಪ್ರದೇಶಗಳಲ್ಲಿ ಮೆಣಸಿನಕಾಯಿ, ದ್ರಾಕ್ಷಿ, ಕಬ್ಬು ಮುಂತಾದವುಗಳನ್ನು ಬೆಳೆಯಲೂ, ಬಾವಿಯ ಸಮೀಪದಲ್ಲಿ ತರಕಾರಿ ಮತ್ತು ಬೇರುಗಳನ್ನು ಬೆಳೆಯಲೂ, ಕೆರೆಗಳ ತಂಪಾದ ನೆಲದಮೇಲೆ ಹಸಿರು ತರಕಾರಿ ಸೊಪ್ಪುಗಳನ್ನು ಬೆಳೆಯುವುದಕ್ಕೂ, ಬದುಗಳು ಔಷಧೀಯ ಸಸ್ಯಗಳನ್ನು ಬೆಳೆಸಲೂ ಅನುಕೂಲವೆಂದು ಹೇಳಲಾಗಿದೆ.

ಭೂಮಿಯ ಕೆಲವು ಗುಣಲಕ್ಷಣಗಳಿಂದಲೇ ಅದು ಇಂತಿಂಥ ಬೆಳೆಗಳಿಗೆ ಯೋಗ್ಯವೆಂದು ಹೇಳಲಾಗಿದೆ. ಉದಾಹರಣೆಗೆ : ಭೂಮಿಯಲ್ಲಿ ಹುತ್ತಗಳಿದ್ದರೆ, ಕುಳಿಗಳಿದ್ದರೆ, ಅಥವಾ ಕಲ್ಲುಗಳಿದ್ದರೆ ಅದು ಕ್ಷಾರೀಯ, ಮತ್ತು ನೀರು ಬಹಳ ಆಳದಲ್ಲಿರುತ್ತದೆ. ಆದ್ದರಿಂದ ಮರಗಳನ್ನು ನೆಟ್ಟರೆ ಅವುಗಳಿಗೆ ಮಾರಕವಾಗಿ ಪರಿಣಮಿಸಬಹುದು. ಹಿಮದಿಂದಾಗಿ ಭೂಮಿ ಶುಷ್ಕವಾಗಿದ್ದರೆ ಮತ್ತು ಹಳೆಯ ಮರದ ಬೊಡ್ಡೆಗಳಿರುವ ಕಡೆ ಮರಗಳನ್ನೆ

ಬ್ಬಿಸಬಾರದು. ಭೂಮೇಲ್ಗಡೆಗೆ, ನೀರು ಹತ್ತಿರವಿರುವ ಕಡೆ ಮರಗಳನ್ನು ನೆಡಲು ಅತ್ಯುತ್ತಮ ಇಂಥ ಕಡೆಗಳಲ್ಲಿ ಈ ಪ್ರಪಂಚದ ಹಾಗೂ ಪ್ರಪಂಚದ ಬೇರೆ ಭಾಗದ ಕಲ್ಯಾಣಕ್ಕಾಗಿ ತೋಟವನ್ನೆಬ್ಬಿಸಬೇಕು.

## ಭೂಮಿಯನ್ನು ಹದಗೊಳಿಸುವಿಕೆ

ಭಾರತೀಯ ಸಂಸ್ಕೃತಿಯಲ್ಲಿ ನೇಗಿಲು ಮತ್ತು ಕೊಳಲು ಪ್ರಮುಖ ಸ್ಥಾನವನ್ನು ಪಡೆದಿವೆ. ಮಹಾಭಾರತದಲ್ಲಿ ದೇವ ಮನುಷ್ಯರೆಂದು ಪರಿಗಣಿಸಲ್ಪಟ್ಟಿರುವ ಬಲರಾಮ ಮತ್ತು ಶ್ರೀ ಕೃಷ್ಣರನ್ನು ಇವುಗಳಿಂದ ಪ್ರತಿನಿಧಿಸಲಾಗುತ್ತದೆ. ಈ ದೃಷ್ಟಿಯಿಂದ ನಮ್ಮ ಧರ್ಮದಲ್ಲಿ ನೇಗಿಲಿಗೆ ಪವಿತ್ರ ಹಾಗೂ ಪ್ರಮುಖಸ್ಥಾನ ನೀಡಿದ್ದಾರೆ. ನೇಗಿಲನ್ನು ಕದ್ದರೆ ಅಥವಾ ಯೋಗ್ಯರೀತಿಯಲ್ಲಿ ಬಳಸದಿದ್ದರೆ ಕ್ರೂರ ಶಿಕ್ಷೆಗೊಳಪಡುತ್ತಿದ್ದರು. ನೇಗಿಲನ್ನು ದಾನ ಮಾಡುವುದು ಅತ್ಯಂತ ಗೌರವಾರ್ಹವಾಗಿತ್ತು. ಅಗ್ನಿ ಪುರಾಣದಲ್ಲಿ "ನೇಗಿಲನ್ನು ದಾನ ಮಾಡುವಾಗ ನೇಗಿಲ ಕುಳಕ್ಕೆ ಚಿನ್ನದ ಲೇಪನವನ್ನು ಲೇಪಿಸಿ ದಾನ ಮಾಡಬೇಕು. ಅಂಥವನು ಸ್ವರ್ಗದಲ್ಲಿ ಗೌರವಾರ್ಹನಾಗುತ್ತಾನೆ" ಎಂದು ಹೇಳಿದೆ.

ನೇಗಿಲು ಮತ್ತು ಅದರ ವಿವಿಧ ಭಾಗಗಳನ್ನು ಪರಾಶರ ಹೇಳುತ್ತಾ, ಕುಡುಗೋಲು (ಶೃಣಿ), ಕುಂಟೆ (ಖಣತ್ರ), ಜರಡಿ (ಕಳನಿ), ಕಣಜ (ಸ್ಥವಿ), ಮೇಟಿ (ದನಗಳು ಹುಲ್ಲನ್ನು ತುಳಿಯುವಾಗ ಕೇಂದ್ರ ಭಾಗದಲ್ಲಿ ನೆಡಲಾಗುವ ಕಂಬ)

ಮೊದಲಾದವುಗಳನ್ನು ನೇಗಿಲಿನ ಗುಣ ವೈಶಿಷ್ಟಗಳು ವೇದಗಳ ಕಾಲದಿಂದ ಹಾಗೆಯೇ ಉಳಿದಿರುವುದನ್ನು ಕಾಣಬಹುದು. ಕುಳ ಮತ್ತು ನೇಗಿಲಿನ ದೇಹಗಳನ್ನು ಮಣ್ಣಿನ ಆಧಾರದ ಮೇಲೆ ಅಲ್ಪ ಸ್ವಲ್ಪ ಮಾರ್ಪಾಡು ಮಾಡಲಾಗುತ್ತಿತ್ತು.

ಕೃಷಿಯನ್ನು ಧಾರ್ಮಿಕವಿಧಿಯೆಂದು ಪರಿಗಣಿಸಲಾಗಿದ್ದ ಅಂದಿನ ಕಾಲದಲ್ಲಿ, ಕೃಷಿಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಶುಭದಿನದಲ್ಲಿ ಭೂದೇವಿ, ಧಾನ್ಯದೇವಿಯರನ್ನೂ ಮತ್ತು ತ್ರಿಮೂರ್ತಿಗಳನ್ನು ಪ್ರಾರ್ಥಿಸಿ, ದನಗಳಕೊಟ್ಟಿಗೆಯನ್ನು ಸಾರಿಸಿ, ಸುಗಂಧದ್ರವ್ಯಗಳನ್ನು ಹರಡಿ, ಸುವಾಸನಾಯುಕ್ತ ಹೂಗಳಿಂದ ಅಲಂಕರಿಸಲಾಗುತ್ತಿತ್ತು. ಅನಂತರ ರೈತನು ಶುಭಚಿಹ್ನೆಗಳನ್ನು ಹೊಂದಿರುವ ಹಸುಗಳು, ಕರುಗಳು ಮತ್ತು ಕೊಂಬಗೆ ಹಿತ್ತಾಳೆ ಅಥವಾ ಚಿನ್ನದ ಕೊಂಬುಹಣಸುಗಳನ್ನು ಹಾಕಿದ ಗೂಳಿಗಳೊಡನೆ ಕೊಟ್ಟಿಗೆಯನ್ನು ಪ್ರದಕ್ಷಿಣೆಮಾಡಿ, ದನಗಳನ್ನು ಕೂಡಬೇಕು. ಇವುಗಳ ಮೇವನ್ನು (ಹಸಿರು ಹುಲ್ಲನ್ನು) ಒಂದು ಶುಭಕಾಲದಲ್ಲಿ ಸಂಗ್ರಹಿಸಿಡಬೇಕು ಎಂದು ನಿರ್ದೇಶಿಸಿದ್ದಾರೆ.

ಉಳುವುದಕ್ಕೆ ಮುಂಚೆ ಹೊಲದಹತ್ತಿರ ಹೋಗಿ ಗಡಸು ಮರದಿಂದ ಮಾಡಲ್ಪಟ್ಟ ನೇಗಿಲನ್ನು ಹಗ್ಗದಿಂದ ಕಟ್ಟಿ ಶುಚಿಯಾದ ಜಾಗದಲ್ಲಿಟ್ಟು, ಶ್ರೀಗಂಧ, ಹೂ, ಕೇಸರಿ ಮುಂತಾದವುಗಳಿಂದ ಅಲಂಕರಿಸಿ ಶಂಖವಾದ್ಯಗಳೊಡನೆ, ಭೂದೇವಿ, ಲಕ್ಷ್ಮಿ, ಸರಸ್ವತಿ, ಇಂದ್ರ, ವರುಣ ಮತ್ತು ಕುಬೇರರಿಗೆ ವಿಶೇಷ ಪೂಜೆಯನ್ನು ಮಾಡಿ, ಶಿವ, ಅಗ್ನಿ, ಮತ್ತು ವರುಣರನ್ನು ಪ್ರತಿನಿಧಿಸುವ ಈಶಾನ್ಯ, ಆಗ್ನೇಯ ಇಲ್ಲವೇ ಪಶ್ಚಿಮಕ್ಕಿರುವ ಯಾವುದೇ ಮೂಲೆಯಿಂದ ಉಳಬೇಕು.

ಕಶ್ಯಪ ಹೇಳುತ್ತಾನೆ :

"ಶುದ್ಧನೀರು, ಸುಗಂಧದ್ರವ್ಯ ಮತ್ತು ಆರತಿಯೆತ್ತಿ ಭೂಮಿ, ಎತ್ತು ಹಾಗೂ ನೇಗಿಲುಗಳನ್ನು ಪೂಜಿಸುವುದರಿಂದ ಶುಭವಾಗುತ್ತದೆ" ಎಂದು ಕೆಲವು ಶ್ಲೋಕಗಳನ್ನು ಹೇಳಿದ್ದಾನೆ.

> "ಓ ಭೂದೇವಿಯೇ. ಸಮಸ್ತವನ್ನು ಧರಿಸುವ ವಿಶಾಲಿಸಿಯೇ, ನಿನಗೆ ನಮಸ್ಕರಿಸಿ ಕೃಷಿ ಮಾಡಲು ಹೊರಟಿದ್ದೇನೆ, ನನ್ನ ಕರ್ಮದಿಂದ ಸಂತುಷ್ಟಳಾಗು. ಓ ಪವಿತ್ರಳೇ, ಉಳುವುದು, ಅಗೆಯುವುದು ಇತ್ಯಾದಿ ಗಳಿಂದ ನಿನಗೆ ಯಾವುದೇ ರೀತಿಯಿಂದ ಧಕ್ಕೆ ಮಾಡಿದರೂ ನನ್ನನ್ನು ಕ್ಷಮಿಸು. ಈ ಎಲ್ಲ ಜೀವಿಗಳು ನಿನ್ನ ಕಲೆ, ನನ್ನ ಮೇಲೆ ಕರುಣೆಯಿಟ್ಟು ಅಮಿತ ಲಾಭವನ್ನು ನೀಡು."

ಹೀಗೆ ವಿಷ್ಣುಪತ್ನಿಯಾದ ಭೂದೇವಿಯನ್ನು ಸ್ತುತಿಸಿ ಅವಳ (ಹೊಲದ) ಸುತ್ತ ಪ್ರದಕ್ಷಿಣೆಮಾಡಿ ದೇವತೆಗಳು, ದಿಕ್ಪಾಲಕರು. ಸೂರ್ಯ ಮೊದಲಾದ ದೇವತೆಗಳನ್ನು ಸ್ತುತಿಸಿ ಪುಣ್ಯಕಾರ್ಯವಾದ ಭೂಮಿಯ ಉಳುಮೆಯನ್ನು ಕೈಗೊಳ್ಳಬೇಕು.

ಹೊಲ ಉಳಲು ಮುಖ್ಯವಾಗಿ ಬೇಕಾದ ಎತ್ತುಗಳನ್ನು ಹೇಗೆ ನೋಡಿಕೊಳ್ಳಬೇಕು ಎಂಬುವುದರ ಬಗ್ಗೆ ಮುಂದೆ ಚಿಂತಿಸುತ್ತಾ, "ಓ ದೈವೀ ಸ್ವರೂಪವಾದ ಹೋರಿಯೇ, ಪಾಪಮುಕ್ತ ಹಸುವಿನ ಪೀಳಿಗೆಯೇ ಇಂದು ನಿನಗೆ ಸುಗಂಧಯುಕ್ತ ಹೂ ಮಾಲೆಗಳೊಡನೆ ಪೂಜೆಗೈಯುತ್ತಿದ್ದೇನೆ, ಭೂಮಿಯ ಉಳುಮೆಯಲ್ಲಿ ನನಗೆ ಸಹಾಯಮಾಡು ಮತ್ತು ಲಾಭವನ್ನು ತಾ; ಹೊಚ್ಚ ಹೊಸಹುಲ್ಲು ಮತ್ತು ಶುದ್ಧ ನೀರನ್ನು ಭಯಭಕ್ತಿಗಳಿಂದ ನಿನಗೆ ನೀಡುತ್ತಿದ್ದೇನೆ. ಶಿವನ ಆಶೀರ್ವಾದಗಳೊಡನೆ

ನನಗೆ ಲಾಭವನ್ನು ನೀಡು." ಎಂದು ಅವುಗಳನ್ನು ಪೂಜಿಸಿದ ಮೇಲೆ ನೇಗಿಲಿಗೆ ಹೂಡಿ ಅವುಗಳಿಗೆ ನೋವಾಗದಂತೆ, ದಣಿವಾಗದಂತೆ ಕೆಲಸವನ್ನು ಪಡೆಯಬೇಕು. ನೋವುಂಟು ಮಾಡಿದರೆ ನಾಶ ಖಂಡಿತ. ಆದ್ದರಿಂದ ಅವುಗಳು ಆಯಾಸಗೊಂಡಿರುವಾಗ ನೇಗಿಲಿಗೆಂದೂ ಹೂಡಬಾರದು.

ಉತ್ತಮ ದನಗಳನ್ನು ಗುರ್ತಿಸುವುದು ಹೇಗೆ? ಕೆಲವು ಚಿಹ್ನೆಗಳು ಶುಭಸೂಚನೆಯನ್ನು ತೋರುತ್ತವೆ. ಅಂಥ ಚಿಹ್ನೆಗಳಿರುವವುಗಳು ದೇಶಕ್ಕೆ, ಪಾಲಕನಿಗೆ ಮತ್ತು ವ್ಯವಸಾಯಕ್ಕೆ ಯೋಗ್ಯವೆಂದು ಹೇಳಿದ್ದಾರೆ. ಎತ್ತುಗಳ ದೇಹ ದಾರ್ಢ್ಯತೆ ಮತ್ತು ಆರೋಗ್ಯದ ಆಧಾರದ ಮೇಲೆ ಅವುಗಳನ್ನು ವಿವಿಧ ವರ್ಗಗಳಾಗಿ ವಿಂಗಡಿಸಿ ಯಾವ ಎತ್ತುಗಳಿಗೆ ಬಿಳಿ ಬಣ್ಣ, ಸುಂದರವಾದ ಕಣ್ಣುಗಳಿದ್ದು ಆಳವಾಗಿ ಉಸಿರೆಳೆದುಕೊಂಡು ಎತ್ತರವಾಗಿರುತ್ತವೋ ಅವುಗಳೆಲ್ಲವೂ ಬ್ರಾಹ್ಮಣವರ್ಗಕ್ಕೆ ಸೇರಿವೆ. ಎತ್ತರವಾಗಿದ್ದು ಕೆಂಪುವರ್ಣದವುಗಳಾಗಿ, ಉಸಿರಾಡುವಾಗ ಗುಡುಗಿನಂಥ ಶಬ್ದಮಾಡುತ್ತವೋ, ಧೈರ್ಯಪ್ರದರ್ಶನ ಮಾಡುತ್ತವೋ ಅವುಗಳು ಕ್ಷತ್ರಿಯ ವರ್ಗ. ಯಾವವುಗಳಿಗೆ ಬಿಳಿ ಮತ್ತು ಕೆಂಪು ಮಚ್ಚೆಗಳಿರುತ್ತವೋ ಅವು ಉತ್ತಮವೂ ಅಲ್ಲ ಅಧಮ ದರ್ಜೆಯವುಗಳೂ ಅಲ್ಲ–ವೈಶ್ಯವರ್ಗ ; ಕ್ರೂರವಾದ, ಕಪ್ಪಾದ, ಮತ್ತು ಅತ್ಯಂತ ಬೇಗ ಕೋಪಗೊಳ್ಳುವಂಥವುಗಳೂ ಶೂದ್ರ ವರ್ಗ ; ಈ ನಾಲ್ಕು ವರ್ಗದವುಗಳೂ ವ್ಯವಸಾಯಕ್ಕೆ ಯೋಗ್ಯ. ಎತ್ತುಗಳ ಕೊಂಬು, ಹಣೆ, ಬಾಲ ಮತ್ತು ಗೊರಸುಗಳು ಬೆಳ್ಳಗಿದ್ದು ದೇಹವು ಬೇರೆ ವರ್ಣದ್ದಾಗಿದ್ದರೆ, ಅಂಥ ಎತ್ತುಗಳು ಶುಭ ಹಾಗೂ ಲಾಭವನ್ನು ತರುತ್ತವೆ.

ಯಾವ ಎತ್ತುಗಳ ವರ್ಣ ಕೆಂಪು, ಹೊಗೆ, ಅಥವಾ ಚೆನ್ನಾಗಿರುವುದಿಲ್ಲವೋ, ದೊಡ್ಡ ಕೊಂಬು, ತೆಳುಕಾಯ, ನಿಶ್ಶಕ್ತ, ಕುಂಟುವಿಕೆ, ಅಡ್ಡಾದಿಡ್ಡಿ ನಡೆಯುವಿಕೆ, ವಿರೂಪ, ದೊಡ್ಡ ಹೊಟ್ಟೆಯವು, ತೂಕಡಿಸುವವುಗಳನ್ನು ಕೀಳುವರ್ಜೆಯವುಗಳೆಂದು ಪರಿಗಣಿಸಬೇಕು ಹಾಗೂ ಅವುಗಳು ವ್ಯವಸಾಯಕ್ಕೆ ಅಯೋಗ್ಯವೆಂದು ಹೇಳಿದ್ದಾರೆ.

ಜೀವನಕ್ಕೆ ಬೇಕಾದ ಆಹಾರವನ್ನು ನೀಡುವ ದನಗಳಿಗೆ ಪ್ರಮುಖ ಸ್ಥಾನವನ್ನು ನೀಡಿದ ನಮ್ಮ ಹಿರಿಯರು, ಹಾಲು ಕೊಡುವ ಹಸುಗಳನ್ನು ಪ್ರೀತಿಯಿಂದ ರಕ್ಷಿಸಿದರೆ ಅಲ್ಲಿ ಮಳೆ ಬೀಳುವುದು ಖಂಡಿತ, ದೇವರು ಅಂಥವರನ್ನು ಪ್ರೀತಿಸುತ್ತಾನೆ ಎಂದು ಹೇಳಿ, ವರ್ಷಕ್ಕೊಮ್ಮೆಯಾದರೂ ಮನೆಯ ಯಜಮಾನ ಮತ್ತು ಆಳುಗಳು ಗೋಪೂಜೆಯನ್ನು ಮಾಡುವುದು ಒಳ್ಳೆಯದು ಎಂದು ಭಾವಿಸಿದ್ದರು. ಬೇಸಿಗೆಯಲ್ಲಿ ನೆರಳಿನಲ್ಲೂ, ಚಳಿಗಾಲದಲ್ಲಿ ರಕ್ಷಿತ ಸ್ಥಳಗಳಲ್ಲೂ, ಕಳ್ಳಕಾಕರಿಂದ ಹಾಗೂ ಕಾಡಿನ ಕ್ರೂರ ಪ್ರಾಣಿಗಳಿಂದ ಹಸುಗಳನ್ನು ಕಾಪಾಡುವುದು ರಾಜನ ಆದ್ಯ ಕರ್ತವ್ಯವೆಂದು ಪರಿಗಣಿಸಲ್ಪಟ್ಟಿತ್ತು.

## ನೇಗಿಲು ಹೊಡುವಿಕೆ

ನೇಗಿಲನ್ನು ಸ್ವಾತಿ, ಉತ್ತರರೋಹಿಣಿ, ಮೃಗಶಿರ ಮೂಲ, ಪುನರ್ವಸು, ಪುಷ್ಯ, ಶ್ರಾವಣ ಮತ್ತು ಹಸ್ತ ನಕ್ಷತ್ರಗಳಲ್ಲಿ, ಬುಧವಾರ ಮತ್ತು ಗುರುವಾರಗಳಂದು ಹೂಡಿದರೆ ಶುಭ ; ಹಾಗೆಯೇ ಹುಣ್ಣಿಮೆ ದಿನಗಳ 2, 5, 10, 11, 13ನೇ ದಿನಗಳಲ್ಲಿ ; ಸೂರ್ಯನು ವೃಷಭ, ಮೀನ, ಕನ್ಯಾ,

ಮಿಥುನ, ಧನುಸ್ಸು, ಅಥವಾ ವೃಶ್ಚಿಕ ರಾಶಿಯಲ್ಲಿದ್ದಾಗ ಉಳುಮೆ ಮಾಡಬೇಕು.

ಭಾನುವಾರ, ಶುಕ್ರವಾರ ಮತ್ತು ಮಂಗಳವಾರವಂದು ಹೂಡಿವರೆ ಅಶುಭ ಮತ್ತು ದೇಶವಲ್ಲಿ ಕ್ರಾಂತಿಯಾಗಬಹುದು; ಅಮವಾಸ್ಯೆಯ ದಿನ ಹೂಡಿವರೆ, ಬೆಳೆಯ ನಷ್ಟ, ತೀವ್ರ ಕಷ್ಟ, ಸೆರೆ, ಅಥವಾ ಸಾವನ್ನು ತರಬಹುದು. ಅಮವಾಸ್ಯೆ ನಂತರದ 8 ನೇ ದಿನ ಎತ್ತುಗಳಿಗೆ ಹಾನಿಕರ, 3 ನೇಯ ದಿನ ಬೆಳಿಗ್ಗೆ, 14ನೆಯ ದಿನ ಭೂಮಿಯ ಒಡೆಯನನ್ನು ಕೊಲ್ಲುತ್ತದೆ. ಸೂರ್ಯನು ಮಕರ ರಾಶಿಯಲ್ಲಿದ್ದಾಗ ಅತಿವೃಷ್ಟಿ, ಕರ್ಕಾಟಕ ದಲ್ಲಿ ಅನಾವೃಷ್ಟಿ. ಸಿಂಹದಲ್ಲಿ ಸರ್ಪಭಯ ಹಾಗೂ ಕಳ್ಳ ಕಾಕರ ಭಯವಿರುತ್ತದೆ. ಆದ್ದರಿಂದ ಎಚ್ಚರವಹಿಸಬೇಕು.

ಸೂರ್ಯ ಮತ್ತು ಚಂದ್ರರ ಸಹ ಶುಭಯೋಗವಿರುವಾಗ ಸ್ನಾನಮಾಡಿ, ಬಿಳಿಯ ಸುಗಂಧಯುಕ್ತ ವಸ್ತ್ರಗಳನ್ನು ತೊಟ್ಟು ಮೊವಲು ಪ್ರಜಾಪತಿಯನ್ನು ಭೂಮಿಯೊಡನೆ ಪೂಜಿಸಿ, ಅಗ್ನಿ ಪ್ರದಕ್ಷಿಣೆಮಾಡಿ ಬ್ರಾಹ್ಮಣರಿಗೆ ದಾನವಿತರಣೆಮಾಡಬೇಕು. ನೇಗಿಲ ಕುಳವನ್ನು ಚಿನ್ನದ ಚೂರಿನಿಂದ ಸ್ಪರ್ಶಿಸಿ, ಅದಕ್ಕೆ ಜೇನನ್ನು ಸವರಿ ಎಡಹೆಗಲಿನ ಮೇಲಿಟ್ಟುಕೊಂಡು ಭೂಮಿಯ ಹತ್ತಿರ ಹೋಗಬೇಕು; ಅನಂತರ ಕಪ್ಪು, ಕೆಂಪು ಅಥವಾ ಕಂದು ಎತ್ತುಗಳನ್ನು ಆರಿಸಿಕೊಂಡು ಅವುಗಳ ಬಾಯಿಗೆ ಬೆಣ್ಣೆ ಅಥವಾ ತುಪ್ಪ ಸವರಿ ನೇಗಿಲನ್ನು ಹೂಡಬೇಕು. ಅನಂತರ ಪೂರ್ವ ದಿಕ್ಕಿಗೆ ಮುಖಮಾಡಿ, ನೇರವಾಗಿ ನಿಂತು, ಹಾಲನ್ನರ್ಪಿಸಿ, ನೇಗಿಲನ್ನು ಪೂಜಿಸಿ ಎತ್ತುಗಳ ಕೊರಳಿನ ಸುತ್ತ ಕುಣಿಕೆ ಯನ್ನು ಕಟ್ಟಬೇಕು. ಎತ್ತುಗಳಿಂದ ಉಳುಮೆಮಾಡುವುದಕ್ಕೆ

ಮೊದಲು ಇಂದ್ರನನ್ನು "ಓ ದೇವತೆಗಳ ರಾಜನೇ, ಶಚೀದೇವಿಯ ಪತಿಯೇ, ಶ್ವೇತಪುಷ್ಪ (ಮಲ್ಲಿಗೆ), ಮೊಸರು, ಹಾಲು, ತುಪ್ಪ ಗಳನ್ನೊಳಗೊಂಡ ಈ ಅರ್ಪಣೆಯನ್ನು ಸ್ವೀಕರಿಸಿ ಉತ್ತಮ ಮಳೆಯನ್ನು ನೀಡು" ಎಂದು ಪ್ರಾರ್ಥಿಸಬೇಕು.

ಉಳುವಾಗ ಅಕಸ್ಮಾತ್, ಅದು ಭೂಮಿಯೊಳಗೆ ಸಿಕ್ಕಿದರೆ, ಅವನ ಹೆಂಡತಿ ಸಾಯುತ್ತಾಳೆ ಅಥವಾ ಬೆಂಕಿಯಿಂದ ನಷ್ಟ ಗೊಳ್ಳುತ್ತಾನೆ. ಗುಳವು ಒಡೆದರೆ ಅಥವಾ ಮುರಿದರೆ ಬೆಳಸು ಗಾರನಿಗೆ ದೇಶೋಚ್ಚಾಟನೆಯಾಗುತ್ತದೆ, ನೇಗಿಲು ಮುರಿದರೆ ಭೂ ಒಡೆಯನೇ ಸಾಯುತ್ತಾನೆ, ನೊಗ ಅಥವಾ ಈಚು ಮುರಿದರೆ ಭೂ ಒಡೆಯ ಸಾಯಬಹುದು, ಸೋದರ ಅಥವಾ ಮಗ ನೀರಿನಲ್ಲಿ ಬಿದ್ದು ಸಾಯಬಹುದು; ನೊಗದ ಕಟ್ಟು ಕತ್ತರಿಸಿದರೆ ಕಾಯಿಲೆ ಬಿದ್ದು ನಷ್ಟ ಹೋಗುತ್ತಾನೆ. ಉಳುವಾಗ ಒಂದು ಎತ್ತು ಬಿಚ್ಚಿಕೊಂಡು ಓಡಿ ಹೋದರೆ ರೈತ ತನ್ನ ಸಹೋದರನೊಡನೆ ಜ್ವರ ಮತ್ತು ಭೇದಿಗಳಿಂದಾಗಿ ಸಾಯ್ಯು ತ್ತಾನೆ. ಎತ್ತುಗಳು ಉಳುವಾಗ ಓಡೋಡುತ್ತಲಿದ್ದರೆ ಬೆಳೆ ಯಲ್ಲಿ ನಷ್ಟ ಅಥವಾ ದೈಹಿಕ ತೊಂದರೆಯುಂಟಾಗಬಹುದು.

ಕೇವಲ ಆಜ್ಞೆಮಾಡಿದ ಮಾತ್ರಕ್ಕೆ ಎತ್ತು ಚಲಿಸಿದರೆ ಐಶ್ವರ್ಯ ಮತ್ತು ಬೆಳೆಯನ್ನು ನಾಲ್ಕು ಪಟ್ಟು ಹೆಚ್ಚು ನಿರೀಕ್ಷಿಸಬಹುದು. ಮಾಘಮಾಸದಲ್ಲಿ ಭೂಮಿಯ ಉಳುಮೆ ಮಾಡಿದರೆ ಚಿನ್ನ, ಫಾಲ್ಗುಣದಲ್ಲಿ ಬೆಳ್ಳಿ, ಚೈತ್ರದಲ್ಲಿ ತಾಮ್ರ, ವೈಶಾಖದಲ್ಲಿ ಬೇರೆ ಯಾವುದೇ ಲೋಹದಂತೆ, ಜ್ಯೇಷ್ಠದಲ್ಲಿ ಕೇವಲ ಮರಳಿನಂತೆ, ಆಷಾಢದಲ್ಲಿ ಧೂಳಿನಂತೆ ಎಂದು ಹೇಳಿದ್ದಾರೆ.

## ಗೊಬ್ಬರಗಳು

ಎಲ್ಲ ಜೀವಿಗಳಿಗೂ ಆಹಾರ ಆವಶ್ಯಕ. ಪ್ರಾಣಿಗಳೆಲ್ಲ ಪರಾವಲಂಬಿಗಳು. ಆದರೆ ಬಹುತೇಕ ಸಸ್ಯಗಳು ಸ್ವಾವಲಂಬಿಗಳು. ಭೂಮಿಯಿಂದ ಸಾರವನ್ನೆಳೆದುಕೊಂಡು ತಮ್ಮ ಆಹಾರವನ್ನು ತಾವೇ ತಯಾರಿಸಿಕೊಂಡು ಬಾಳಬಲ್ಲವು. ಭೂಮಿಯ ಸಾರವನ್ನು ಸಸ್ಯಗಳು ಹೀರುತ್ತಲೇ ಹೋದಲ್ಲಿ ಭೂಮಿ ಬರಡಾಗುತ್ತಾ ಹೋಗಬಹುದು ಅಥವಾ ಸಸ್ಯಗಳಿಗೆ ಸಾಕಷ್ಟು ಆಹಾರ ದೊರಕದೇ ಇರಬಹುದು. ಇದನ್ನು ಗುರ್ತಿಸಿದ್ದ ನಮ್ಮ ಪ್ರಾಚೀನರು ಸಸ್ಯಗಳು ಸೊಂಪಾಗಿ ಬೆಳೆಯುವಂತೆ ಮಾಡಲು ಕೃತಕವಾಗಿ, ಪ್ರಾಣಿಗಳ ಮಲ, ಮೀನು, ಮೂಳೆ, ದನದಮಾಂಸ ಇವುಗಳನ್ನು ಹಾಕಿ ಫಲವತ್ತತೆಯನ್ನು ಹೆಚ್ಚಿಸುತ್ತಿದ್ದ ಉಲ್ಲೇಖಗಳು ಅರ್ಥಶಾಸ್ತ್ರ, ಬೃಹತ್ ಸಂಹಿತೆ ಮತ್ತು ಅಗ್ನಿಪುರಾಣದಲ್ಲಿ ವಿಪುಲವಾಗಿ ದೊರೆಯುತ್ತವೆ.

## ತಯಾರಿಕೆ

ಮಾಘ ಮಾಸದಲ್ಲಿ ಸಗಣಿಯನ್ನು ಸಣ್ಣ ಸಣ್ಣ ಉಂಡೆಗಳಾಗಿ ಮಾಡಿ ಒಣಗಿಸಬೇಕು. ನಂತರ ಫಾಲ್ಗುಣದಲ್ಲಿ ಶೇಖರಣೆಗೆಂದೇ ಮಾಡಿದ ಗುಂಡಿಗಳಲ್ಲಿ ಇವುಗಳನ್ನು ಹಾಕಿ, ಬೀಜ ಬಿತ್ತುವ ಕಾಲದಲ್ಲಿ ತೆಗೆದು ಭೂಮಿಯ ಮೇಲೆ ಎರಚಬೇಕು. ಗೊಬ್ಬರವಿಲ್ಲದಿದ್ದರೆ ಭತ್ತವು ಹೆಚ್ಚು ಫಸಲನ್ನು ನೀಡಲಾರದು. ಮರಗಳಲ್ಲಿ ಹೂ ಮತ್ತು ಫಲ ಬಿಡುವಿಕೆಯನ್ನು ಹೆಚ್ಚಿಸಲು, ಎಳ್ಳು, ಆಡು ಅಥವಾ ಕುರಿಗಳ ಹಿಕ್ಕೆ, ಬಾರ್ಲಿ ಮತ್ತು ಸ್ವಲ್ಪ ದನದ ಮಾಂಸವನ್ನು ನೀರಿನಲ್ಲಿ ಬೆರೆಸಿ ಏಳು ರಾತ್ರಿಗಳ ವರೆಗೆ ಹಾಗೆಯೇ ಬಿಟ್ಟು ದೊರೆತ ನೀರನ್ನು ಮರಗಳ ಬೇರಿನ ಸುತ್ತ ಹೊಯ್ಯಬೇಕು.

ಬೀಜ ಬಿತ್ತುವ ಮುನ್ನ ಬೀಜಗಳನ್ನು ಹೇಗೆ ಸಂಸ್ಕರಿಸ ಬೇಕು ಎನ್ನುವುದಕ್ಕೆ ಕೈಗೆ ತುಪ್ಪವನ್ನು ಸವರಿಕೊಂಡು ಕಾಳು ಗಳಿಗೆ ಹಚ್ಚಿ ಅವುಗಳನ್ನು ಬಿಡಿಬಿಡಿಯಾಗಿ ಹರಡಬೇಕು. ಮತ್ತೆ ಇದೇ ಕಾಳುಗಳನ್ನು ರಾತ್ರಿ ಹಾಲಿನಲ್ಲಿ ಹಾಕಬೇಕು. ಅದರ ಬೆಳಗ್ಗೆ, ಕಾಳುಗಳನ್ನು ತೆಗೆದು ಬಿಡಿ ಬಿಡಿಯಾಗಿ ಹರಡಬೇಕು. ಇದೇ ಕಾರ್ಯವನ್ನು ಹತ್ತು ದಿನಗಳವರೆಗೆ ಮುಂದುವರಿಸಬೇಕು. ನಂತರ ಬೀಜಗಳಿಗೆ ಸೆಗಣಿಯನ್ನು ಹಚ್ಚಿ ಹಂದಿ ಮಾಂಸ ಮತ್ತು ಜಿಂಕೆ ಮಾಂಸವಿರುವ ಪಾತ್ರೆಯೊಳಗಿಟ್ಟು ಎಚ್ಚರದಿಂದ ಹಬೆ ಹಾಯಿಸಬೇಕು. ಹೀಗೆ ಮಾಡಿದ ಮೇಲೆ ಬೀಜಗಳನ್ನು ಭೂಮಿಯೊಳಕ್ಕೆ ಬಿತ್ತಿ ಪ್ರತಿದಿನವೂ ಕ್ಷೀರ ಮಿಶ್ರಿತ ನೀರನ್ನು ಚುಮುಕಿಸಬೇಕು ಎಂದು ವರಾಹಮಿಹಿರ ತನ್ನ ಬೃಹತ್‌ಸಂಹಿತೆ ಯಲ್ಲಿ ಹೇಳಿದ್ದಾನೆ.

ಅಗ್ನಿಪುರಾಣದಲ್ಲಿ ಬಾರ್ಲಿಪುಡಿ, ಎಳ್ಳು ಮತ್ತು ಆಡಿನ ಹಿಕ್ಕೆಗಳ ಮಿಶ್ರಣವನ್ನು, ದನದ ಮಾಂಸವನ್ನು ತೊಳೆದ ನೀರಿನಲ್ಲಿ ಏಳು ರಾತ್ರಿಗಳ ಕಾಲ ನೆನೆಸಿ ದೊರೆತ ಮಿಶ್ರಣವನು ಮಣ್ಣಿಗೆ ಹಾಕುವುದರಿಂದ ಮರವು ಪುಷ್ಪ ಫಲಭರಿತವಾಗುತ್ತದೆ ಮತ್ತು ಮೀನುಗಳನ್ನು ತೊಳೆದ ನೀರನ್ನು ಚುಮುಕಿಸುವುದರಿಂದಲೂ ಉತ್ತಮ ಬೆಳವಣಿಗೆಯನ್ನು ನಿರೀಕ್ಷಿಸಬಹುದು ಎಂದು ಹೇಳ ಲಾಗಿದೆ.

ಉಪವನ ವಿನೋದದಲ್ಲಿ ಬಾರ್ಲಿ ಹಿಟ್ಟನ್ನು ತೆಂಗಿಗೂ, ಎಳ್ಳಿನ ಹಿಂಡಿಯನ್ನು ಖರ್ಜೂರಕ್ಕೂ ಉಪಯೋಗಿಸಬಹುದೆಂದು ಹೇಳಲಾಗಿದೆ. ಮಾವಿನ ಮರಕ್ಕೆ ಹಾಲು ಮತ್ತು ಸಂತಪಲ್ಲವ

ಮುಂತಾದುವುಗಳ ಜೊತೆಗೆ ಜಿಂಕೆ, ನರಿ, ಆನೆ, ಕುದುರೆಗಳ ಕೊಬ್ಬಿನ ಸಾರವನ್ನು ಹಾಕಿದರೆ ಮಾವು ಬಹಳ ಸುವಾಸನಾ ಯುಕ್ತ ಹೂಗಳನ್ನೂ, ರುಚಿರುಚಿಯಾದ ಫಲಗಳನ್ನೂ ನೀಡುತ್ತದೆ ಎಂದೂ; ಬಳ್ಳಿಗಳಿಗೆ ಹಕ್ಕಿಗಳ ಮಲ, ಭತ್ತದ ಹುಲ್ಲು ಮತ್ತು ಹೊಟ್ಟಿನ ಸಂಯುಕ್ತ ಮಿಶ್ರಣವನ್ನು ಹಾಕಿದರೆ ಹೂ ಹಣ್ಣು ಗಳನ್ನು ಬಿಡುತ್ತದೆಂದೂ ಹೀಗೆಯೇ ಸ್ಲಂ ಮರದ ಬೇರುಗಳಿಗೆ ಎಳ್ಳು, ಯಷ್ಟಿಮಧು ಮತ್ತು ಕುನಾಪ ಜಲಗಳ ಮಿಶ್ರಣವನ್ನು ಹಾಕುವುದರಿಂದ ಸಕ್ಕರೆಯಷ್ಟು ಸಿಹಿಯಾದ ಫಲಗಳನ್ನು ಬಿಡುತ್ತ ದೆಂದು ಹೇಳಲಾಗಿದೆ

ಕುನಾಪಜಲದ ತಯಾರಿಕೆಯನ್ನು ಹೀಗೆ ಹೇಳಲಾಗಿದೆ : ಜಿಂಕೆ, ಹಂದಿ, ಮೀನು, ಕುರಿ, ಆಡು ಮತ್ತು ಘೇಂಡಾಮೃಗಗಳ ಮಾಂಸ, ಮಜ್ಜ ಮತ್ತು ಕೊಬ್ಬನ್ನು ಕುದಿಸಿ ಈ ಮಿಶ್ರಣವನ್ನು ಮಣ್ಣಿನ ಗಡಿಗೆಗೆ ಹಾಕಿ ಇದಕ್ಕೆ ಹಾಲು, ಎಳ್ಳುಹಿಂಡಿ, ಜೇನಿನಲ್ಲಿ ಕುದಿಸಿದ ಉದ್ದು, ವಿವಿಧ ಬೇಳೆಗಳ ಸಾರ, ಶುದ್ಧ ಬೆಣ್ಣೆ ಮತ್ತು ಬಿಸಿನೀರನ್ನು ಹಾಕಬೇಕು. ಈ ವಸ್ತುಗಳ ಬಗ್ಗೆ ನಿರ್ದಿಷ್ಟ ನಿರ್ಧಾರವೇನೂ ಇಲ್ಲ. ಇಂಥ ಮಿಶ್ರಣವಿರುವ ಗಡಿಗೆಯನ್ನು ಶಾಖವಾದ ಜಾಗದಲ್ಲಿ ಸುಮಾರು 15 ದಿವಸಗಳ ವರೆಗೆ ಇಟ್ಟರೆ ಈ ಮಿಶ್ರಣವು "ಕುನಾಪ"ಜಲವೆಂದು ಕರೆಯಲಾಗುವ ವಸ್ತು ವಾಗುತ್ತದೆ. ಇದನ್ನು ಹಾಕುವುದರಿಂದ ಗಿಡಗಳು ಸೊಂಪಾಗಿ ಬೆಳೆಯುತ್ತವೆ.

ಬಿಳಿ ಎಳ್ಳು, ಬಾಳೆಎಲೆ, ಸಫಾರಿ ಮೀನು, ಹಂದಿ ಮತ್ತು ಬೆಕ್ಕಿನ ಮಲಗಳನ್ನು ಸಮಪ್ರಮಾಣದಲ್ಲಿ ಮಿಶ್ರಮಾಡಿ ಶುದ್ಧ ಬೆಣ್ಣೆಯೊಡನೆ ಸೇರಿಸಿ ಮರಗಳ ಕಾಂಡಕ್ಕೆ ಲೇಪಿಸಿ, ಹೊಗೆ

ಕೊಟ್ಟರೆ, ಆ ಮರಗಳು ಎಲ್ಲ ರೋಗಗಳಿಂದ ಮುಕ್ತವಾಗಿ ಸೊಂಪಾಗಿ ಬೆಳೆಯುತ್ತವೆ. ಅವುಗಳ ರೆಂಬೆಗಳು, ಹೂಗಳು ಮತ್ತು ಜೇನಿನಿಂದ ಅಲಂಕೃತವಾಗುತ್ತವೆ.

ಕುಮರೆ, ಹಂದಿ, ಮೀನುಗಳೇ ಅಲ್ಲವೆ ಕುರಿ, ಆಡು ಮತ್ತು ಇನ್ನಿತರ ಕೊಂಬಿನ ಮೃಗಗಳಿಂದ ಎಷ್ಟು ಸಾಧ್ಯವೋ ಅಷ್ಟು ರಕ್ತ ಸಾರ, ಮಜ್ಜೆ ಮುಂತಾದವುಗಳನ್ನು ತೆಗೆದು ನೀರಿನಲ್ಲಿ ಹಾಕಿ ಕಾಯಿಸಬೇಕು ನಂತರ ಅವನ್ನು ಎಣ್ಣೆ ಹಚ್ಚಿರುವ ಪಾತ್ರೆಯೊಳಕ್ಕೆ ಹಾಕಿ ಜೇನಿನೊಡನೆ ಎಳ್ಳುಹಿಂಡಿಯ ಪುಡಿಯನ್ನು ಹಾಕಬೇಕು. ಅವರೊಳಕ್ಕೆ ಕುದಿಸಿದ ಉದ್ದಿನಬೇಳೆ ಮತ್ತು ಮೇಲೆ ಹೇಳಿದ ಎಲ್ಲ ಪ್ರಾಣಿಗಳ ಮೂತ್ರವನ್ನು ಹಾಕಿ ಶಾಖಭರಿತ ಪ್ರದೇಶದಲ್ಲಿ ಇಟ್ಟರೆ ಮೃತಶರೀರಸಾರ ದೊರೆಯುತ್ತದೆ. ಇದು ಮರಗಳಿಗೆ ಅತ್ಯುತ್ತಮ.

ಇವುಗಳಲ್ಲದೆ ಅನೇಕ ಮಿಶ್ರಣಗಳ ಉದಾಹರಣೆಗಳು ವಿಪುಲವಾಗಿ ದೊರೆಯುತ್ತವೆ.

ಮೀನು ಮತ್ತು ಹೆಬ್ಬಾವುಗಳ ಕೊಬ್ಬನ್ನು ಗಿಡಗಳಿಗೆ ಹಾಕಿದರೆ ಸ್ವರ್ಗದ ಕಲ್ಪವೃಕ್ಷದಂತೆ ಹೂ ಹಣ್ಣುಗಳಿಂದ ತುಂಬಲ್ಪಡುತ್ತವೆ. ಎಳ್ಳು, ಉಮ್ಮ, ಹೆಂಡ, ಜೇನು ಮತ್ತು ಉಪ್ಪುಗಳನ್ನು ಮಿಶ್ರಮಾಡಿ ತೆಂಗಿನ ಮರಕ್ಕೆ ರಾತ್ರಿಹೊತ್ತು ಸವರಿದರೆ ಮರವು ರೋಗದಿಂದ ಮುಕ್ತವಾಗಿ ದೊಡ್ಡ ದೊಡ್ಡ ಕಾಯಿಗಳ ಭಾರದಿಂದ ಜಗ್ಗುತ್ತವೆ. ಬಾರ್ಲಿ ಹೊಟ್ಟು ಅಥವಾ ಅಕ್ಕಿಯ ಹುಳಿಗಂಜಿಯನ್ನು ನೀರು ಹಾಲಿನೊಡನೆ ಮಿಶ್ರಿಸಿ ತೆಂಗಿನಮರಗಳಿಗೆ ಹಾಕಿದರೆ ಚೊಂಬಿನಷ್ಟು ದೊಡ್ಡ ಕಾಯಿಗಳನ್ನು ಬಿಡುತ್ತವೆ.

ದಾಳಿಂಬೆ ಮರಗಳಿಗೆ ನರಿಯ ಮಾಂಸ ಮತ್ತು ಸಕ್ಕರೆಯನ್ನು ನೀರಿನಲ್ಲಿ ಬೆರೆಸಿ ಎರೆದರೆ ಮರವು ಫಲಭರಿತವಾಗಿ ಜಗ್ಗುತ್ತದೆ ಅಥವಾ ವಿಷರಹಿತ ಹಾವುಗಳು, ಹಾಲು ಮತ್ತು ಮೀನಿನ ಸಾರಗಳನ್ನು ಹಾಕಿದರೂ ಸಹ ದೊಡ್ಡ ಹಾಗೂ ರುಚಿಕರ ಫಲಗಳನ್ನು ನೀಡುತ್ತವೆ.

ಬಾಳೆಯ ಬೇರುಗಳ ಸುತ್ತ ಹುಲ್ಲು, ಒಣಸಗಣಿ, ಬೂದಿ ಮತ್ತು ಕಾಶಫಲ (?) ಗಳ ಸಾರವನ್ನು ಎರೆದರೆ ದೊಡ್ಡ ಹಾಗೂ ಹೆಚ್ಚು ಹಣ್ಣುಗಳನ್ನು ಬಿಡುತ್ತದೆ.

ಚಕ್ಕೋತಕ್ಕೆ ನರಿಯ ಮಾಂಸದೊಡನೆ ಸಕ್ಕರೆಯನ್ನು ಸೇರಿಸಿದ ಮಿಶ್ರಣವನ್ನು ಹಾಕಿದರೆ ಹೆಚ್ಚು ಫಲವನ್ನೂ ಹಾಗೂ ಮಾಂಸ, ಬೆಲ್ಲ ಮತ್ತು ಹಾಲನ್ನು ಕಿತ್ತಳೆಗೆ ನೀಡಿದರೆ ಅಧಿಕ ಫಲವನ್ನುನೀಡುತ್ತವೆ. ಮಾಂಸ ಮತ್ತು ಏಲಕ್ಕಿಯಿಂದ ವಸ್ತುಗಳ ಪರಿಮಳ ಭರಿತ ಸಾರದಿಂದ ಕೇತಕಿ ಗಿಡವನ್ನು ಪೋಷಿಸಿದರೆ ಅದು ಪುಷ್ಪಭರಿತವಾಗುತ್ತದೆ.

ಕುಂಬಳ ಜಾತಿಯ ತರಕಾರಿಗಳಿಗೆ ಭಾನುವಾರದಂದು ಮೂಳೆ ಮತ್ತು ಹಂದಿಯ ಮಲಗಳಿಂದ ಹೊಗೆ ಹಾಕಿದರೆ ಸಮೃದ್ಧಿಯಾಗಿ ಫಲ ಬಿಡುತ್ತದೆ.

ಸುರಪಾಲನ ವೃಕ್ಷಾಯುರ್ವೇದದಲ್ಲಿ ವಿವಿಧ ಗೊಬ್ಬರಗಳ ತಯಾರಿಕೆ, ವಿವಿಧ ಬೆಳೆ, ಮರಗಿಡಗಳಿಗೆ ಅವುಗಳನ್ನು ಹಾಕುವಿಕೆ ಮುಂತಾದವುಗಳ ಬಗ್ಗೆ ವಿವರವಾಗಿ ಬರೆಯಲಾಗಿದೆ.

## ಮೃತಶರೀರ ಜಲ

ಜಿಂಕೆ, ಹುಳು, ಮೀನು, ಕುರಿ, ಆಡು ಮತ್ತು ಘೇಂಡಾ ಮೃಗ ಮುಂತಾದವುಗಳ ಮಾಂಸ, ರಕ್ತಸಾರ, ಮಜ್ಜೆ ಮತ್ತು ಕೊಬ್ಬನ್ನು ಸಂಗ್ರಹಿಸಿ ನೀರಿನಲ್ಲಿ ಬೇಯಿಸಬೇಕು. ಬೆಂದ ಮಿಶ್ರಣವನ್ನು ಪಾತ್ರೆಯೊಳಕ್ಕೆ ಸುರಿದು ಇದಕ್ಕೆ ಹಾಲು, ಎಳ್ಳು ಹಿಂಡಿ ಪುಡಿ, ಜೇನು, ಹೆಸರು, ತುಪ್ಪ ಮತ್ತು ಬಿಸಿ ನೀರನ್ನು ಹಾಕಬೇಕು. ಈ ವಸ್ತುಗಳು ಇಂತಿಷ್ಟೇ ಇರಬೇಕೆಂಬ ನಿರ್ಬಂಧ ವಿಲ್ಲ. ಈ ಮಿಶ್ರಣವಿರುವ ಪಾತ್ರೆಯನ್ನು ಹದಿನೈದು ದಿವಸಗಳ ವರೆಗೆ ಶಾಖವಾದ ಪ್ರದೇಶವಲ್ಲಿಟ್ಟು ನಂತರ ದೊರಕುವ ಪಕ್ವವಾದ ಮಿಶ್ರಣವು ಗಿಡಗಳ ಪೋಷಣೆಗೆ ಯೋಗ್ಯವಾಗುತ್ತದೆ.

ನೋಷಂಬಿ ಗಿಡಕ್ಕೆ ನರಿ ಮಾಂಸ, ಬೇರೆ ಮರಗಳಿಗೆ ಬೆಲ್ಲ, ಹಾಲು ಮತ್ತು ರಕ್ತ, ತೆಂಗಿನಮರಕ್ಕೆ ಉಪ್ಪು, ಅಡಿಕೆಮರದ ಬೊಡ್ಡೆಗೆ ಮಲವನ್ನು ಹಾಕಿದರೆ ತುಂಬ ಫಲಭರಿತವಾಗುತ್ತದೆ.

ಐಮ ಜಾತಿಯ ರೆಂಬೆಗಳನ್ನು ಜಿಂಕೆ, ಹಂದಿ, ನರಿ ಮತ್ತು ಕುದುರೆ ಇತ್ಯಾದಿಗಳ ಕೊಬ್ಬಿನೊಡನೆ ಕುದಿಸಿ ಮಾವಿಗೆ ನೀಡಿದರೆ ತುಂಬ ಸುವಾಸನೆಯುಳ್ಳ ಹಣ್ಣುಗಳನ್ನು ತ್ವರಿತವಾಗಿ ನೀಡುತ್ತದೆ ಬಿಳಿಸಾಸಿವೆ, ಬಾಳೆಎಲೆ, ಮೀನು, ಹಂದಿ ಮತ್ತು ಬೆಕ್ಕಿನ ಮಲ ಮುಂತಾದವುಗಳನ್ನು ತುಪ್ಪದೊಡನೆ ಬೆರೆಸಿ ಮರಗಳಿಗೆ ಬಳಿದರೆ ಒಳ್ಳೆಯದು. ಹೀಗೆ ಬಳಿಯುವುದರಿಂದ ಕೊಂಬೆ, ಕಾಂಡ, ತೊಗಟೆಗಳು ಸುಂದರವಾಗುತ್ತವೆ ಮತ್ತು ರೋಗಗಳು ನಿರ್ಮೂಲ ವಾಗುತ್ತವೆ. ಮರಗಳ ಎಲೆ ಮತ್ತು ಹೂಗಳು ಹೆಚ್ಚುತ್ತವೆ.

ಯಾವ ಮರಕ್ಕೆ ಗೋಡು ಮತ್ತು ಆಡಿನ ಮೂತ್ರಗಳನ್ನು ಹಾಕಲ್ಪಡುತ್ತದೋ ಮತ್ತು ನೀರಿನಿಂದ ಹಬೆಯನ್ನು ನೀಡಲಾಗು ತ್ತದೋ ಅವುಗಳು ಚೆನ್ನಾಗಿ ಬೆಳೆಯುತ್ತವೆ.

## ಮುಟ್ಟುವಿಕೆ

ಕೇವಲ ಮುಟ್ಟುವಿಕೆಯಿಂದಲೇ ಸಸ್ಯಗಳು ಪುಷ್ಪಫಲಭರಿತವಾಗುತ್ತವೆಯೇ? ಈ ಪ್ರಶ್ನೆಗೆ ಆಧುನಿಕ ವಿಜ್ಞಾನವು ಮೌನವಾಗಿದ್ದರೂ, ಹಿಂದೆ ಅನೇಕ ಉದಾಹರಣೆಗಳನ್ನು ನೀಡಲಾಗಿದೆ. ಮುಟ್ಟುವಿಕೆಯೆಂದರೆ ಲೋಹದಿಂದ ಅಥವಾ ಮನುಷ್ಯರಿಂದ ಎಂದರ್ಥ.

ಉದಾಹರಣೆಗೆ: ಬಾಳೆಯ ಬೇರು ಮತ್ತು ಫಲ ಬಿಡುವ ಜಾಗಗಳನ್ನು ದಂತದ ಪುಡಿಯಲ್ಲಿ ಕಾಯಿಸಿದ ಸರಳಿನಿಂದ ಚುಚ್ಚಿದರೆ ಫಲಭರಿತವಾಗುತ್ತದೆ. ಬಾಳೆ ಅಥವಾ ಅದರ ಬೇರನ್ನು ಕಾಡುಹಂದಿಯ ಮಲ ಅಥವಾ ಕುದುರೆ ಲದ್ದಿಯ ಬೆಂಕಿಯಲ್ಲಿ ಕಾಯಿಸಿದ ಕಬ್ಬಿಣದ ಸರಳಿನಿಂದ ಚಿಟಿಕೆ ಹಾಕಿದರೆ ಸಮೃದ್ಧವಾಗಿ ಫಲಬಿಡುತ್ತದೆ.

ಇವುಗಳಿಗಿಂತ ತುಂಬಾ ಸ್ವಾರಸ್ಯವಿರುವವುಗಳೆಂದರೆ: ಪದ್ಮಿನೀ ಜಾತಿಯ ಸ್ತ್ರೀ ಸರ್ವಾಲಂಕಾರಭೂಷಿತಳಾಗಿ ಬಾಯಿಗೆ ನೀರು ತುಂಬಿಕೊಂಡು ಮುಕ್ಕುಳಿಸಿ ಮರದ ಬುಡದಲ್ಲಿ ಉಗುಳಿದರೆ ಬಕುಳ ವೃಕ್ಷ ಹೂ ಬಿಡುತ್ತದೆ.

ಮಾವಿನ ಮರವು ಇನ್ನೇನು ಹೂಬಿಡುತ್ತದೆನ್ನುವಾಗ ಯುವತಿಯು ತುದಿಯುಗುರಿನಿಂದ ಕೆರೆದರೂ ಸಹ ಪುಳಕಿತವಾಗುತ್ತದೆ. ಮನ್ಮಥನ ನಿಶಾನೆಯಂತಿರುವ ಯುವತಿಯು, ಅವಳ ಪಾದಗಳಿಗೆ ಅರಗಿನ ಕಡುಗೆಂಪು ಬಣ್ಣವನ್ನು ಹಚ್ಚಿ, ಝಣಗುಟ್ಟುವ ಕಾಲಂದುಗೆಯನ್ನು ತೊಟ್ಟು ಪ್ರಣಯಾಸಕ್ತಿಯಿಂದ

ಒಪ್ಪರೆ ಅಶೋಕವೃಕ್ಷವು ಐಶ್ವರ್ಯಭರಿತವಾಗಿ ಹೂ ಬಿಡುತ್ತದೆ. ವಿಲಾಸಿನಿಯಾದ ಸುಂದರಿಯು ತನ್ನ ತಾವರೆಯ ಬಳ್ಳಿಗಳಂಥ ತೋಳುಗಳಿಂದ ಕುರಬಕ ಮರವನ್ನು ಆಲಂಗಿಸಿದರೆ ಅದು ಅದರ ಪುಷ್ಪಗಳ ಬೆಡಗನ್ನು ಪ್ರದರ್ಶಿಸುತ್ತದೆ. ಆದರೆ ತಿಲಕ ಮರವು ಕೇವಲ ಅವಳ ಓರೆ ನೋಟದಿಂದಲೇ ಫಲಪುಷ್ಪಭರಿತ ವಾಗುತ್ತದೆ ಎಂದು ಹೇಳಲಾಗಿದೆ.

## ಬೆಳೆಗಳು

ಭತ್ತ, ಗೋಧಿ, ಬಾರ್ಲಿ ಮತ್ತು ತೃಣಧಾನ್ಯಗಳು ಭಾರತೀಯರ ಮುಖ್ಯ ಆಹಾರ ಬೆಳೆಗಳು. ಇವುಗಳ ಜೊತೆಗೆ ಕಬ್ಬು, ಬಾರ್ಲಿ, ಮಾವು, ಸೆಣಬು, ಶುಂಠಿ, ಅರಿಶಿನ, ಕುಂಬಳ, ಸೌತೆ, ಮೆಣಸು, ಎಳ್ಳು, ಸಾಸಿವೆ, ಕೋಸು ಮುಂತಾದ ಬೆಳಸುಗಳನ್ನು ಸಹ ಬೆಳೆಯುತ್ತಿದ್ದರು. ಭಾರತದ ವಾಯುಗುಣಗಳ ವೈಪರೀತ್ಯ ಗಳಿಗೆ ಹೊಂದಿಕೊಳ್ಳುವಂಥ ಬೆಳೆಗಳನ್ನು ಬೆಳೆಯುವುದು ಸಾಮಾನ್ಯವಾಗಿ ಕಂಡುಬರುತ್ತಿತ್ತು. ಒಂದೇ ಬೆಳೆಯಲ್ಲಿ ವಿವಿಧ ಋತುಗಳಿಗೆ, ವಿವಿಧ ಮಣ್ಣುಗಳಿಗೆ ಹೊಂದಿಕೊಳ್ಳುವಂಥ ತಳಿ ಗಳನ್ನೂ ಸಹ ಬೇರ್ಪಡಿಸಿಟ್ಟುಕೊಂಡು ಉಪಯೋಗಿಸುತ್ತಿದ್ದರು.

ಭತ್ತವನ್ನು ಅದು ಕೊಯ್ಲಿಗೆ ಬರುವ ಅವಧಿಗನುಗುಣವಾಗಿ ನಾಲ್ಕು ಮುಖ್ಯ ಗುಂಪುಗಳಾಗಿ ವಿಂಗಡಿಸಿದ್ದಾರೆ. ಬೇಸಿಗೆಯಲ್ಲಿ ಬೆಳೆಯುವವುಗಳಿಗೆ ಗ್ರೀಷ್ಮಿಕ; ಮಳೆಗಾಲದಲ್ಲಿ ವರ್ಷಿಕ; ಶರತ್ಕಾಲ ದವುಗಳಿಗೆ ಶರದ; ಚಳಿಗಾಲದವುಗಳಿಗೆ ಹೈಮನ; ಬೇಸಿಗೆಯಲ್ಲಿ ಕೇವಲ ಅರುವತ್ತು ದಿನಗಳಲ್ಲಿ ಮಾಗುವವುಗಳಿಗೆ ಷಷ್ಟಿಕ: ಮಳೆಗಾಲದಲ್ಲಿ ಬೆಳೆಯಬಲ್ಲಂಥವುಗಳಿಗೆ ವ್ರಿಹಿ: ಚಳಿಗಾಲ

ದಲ್ಲಿ ಮಾಗುವವುಗಳಿಗೆ ಶಾಲಿ ಎಂದೂ ವಿಂಗಡಿಸಿದ್ದರು. ಕಾಶ್ಮೀರ ಬಂಗಾಳ, ನೇಪಾಳ, ಪಾಂಚಾಲ, ಕೋಸಲ, ಕುರು, ವಿರಾಟ, ಉಜ್ಜಯಿನಿ, ಮಾಳವ, ಸಿಂಧ್, ಮಥುರ, ಬಂದೇಲ ಖಂಡ, ಕೊಂಕಣ ಮತ್ತು ಆಂಧ್ರಗಳಲ್ಲಿ ಭತ್ತವನ್ನು ಮಳೆಗಾಲದಲ್ಲಿ ಮಾತ್ರ ಬೆಳೆಯಬೇಕು ಎಂದು ಕಾಶ್ಯಪ ಹೇಳಿದ್ದಾನೆ. ನದಿ ನೀರು ಇರುವೆಡೆಗಳಲ್ಲಿ ಅಥವಾ ಕಾಲುವೆಗಳಲ್ಲಿ ನೀರನ್ನು ಬಿಟ್ಟಾಗ ಬೇಸಿಗೆ ಯಲ್ಲಿ ಬೇಸಾಯ ಮಾಡಬಹುದು ಅಥವಾ ಹರಿಯುವ ನದಿಗಳಿಗೆ ಮತ್ತು ತೊರೆಗಳಿಗೆ ಒಡ್ಡನ್ನು ಕಟ್ಟಿ, ನಿಂತ ನೀರನ್ನು ಸಹ ವ್ಯವ ಸಾಯಕ್ಕೆ ಉಪಯೋಗಿಸಿಕೊಳ್ಳಬಹುದು.

ಹಳ್ಳಿಗಳು ನದಿ ದಂಡೆಗಳು, ಕಾಡು ಪ್ರದೇಶಗಳು, ಬೆಟ್ಟದ ಇಳುಕಲುಗಳು, ಹಳ್ಳ ಪ್ರದೇಶಗಳು ಮತ್ತು ಬಯಲುಗಳನ್ನು ಅವುಗಳ ಪ್ರಕೃತಿಗೆ ತಕ್ಕಂತೆ ಎರಡು ವಿಧಗಳಾಗಿ ವಿಂಗಡಿಸಲಾಗಿದೆ ಸಾಲಿಭೂಮಿ ಮತ್ತು ಅಧಕಭೂಮಿ. ಶಾಲಿಭೂಮಿಯು ಋಷಿಗಳಿಂದ ಅತ್ಯುತ್ತಮ ಭೂಮಿಯೆಂದು ಪರಿಗಣಿಸಲ್ಪಟ್ಟಿದೆ. ಅಧಕಭೂಮಿಯು ಅತ್ಯುತ್ತಮವಲ್ಲದಿದ್ದರೂ ಉತ್ತಮ ಫಸಲನ್ನು ನೀಡಬಲ್ಲದು. ಮೆತು ಜೇಡಿಮಣ್ಣಿರುವ ಮತ್ತು ಸಣ್ಣ ಸಣ್ಣ ಪ್ರದೇಶಗಳಿಗೆ ಒಡ್ಡನ್ನು ಹಾಕಿ ನೀರು ನಿಲ್ಲುವಂತೆ ಮಾಡಿರುವ ಪ್ರದೇಶಗಳು ಭತ್ತ ಬೆಳೆಯಲು ಯೋಗ್ಯವೆಂದು ಹೇಳಲಾಗಿದೆ

ಬೆಳೆಗಳನ್ನು ಬೆಳೆಯುವುದಕ್ಕಿಂತ ಮುಂಚೆ ಬೀಜಗಳು, ಅವುಗಳ ರಕ್ಷಣೆ ಮತ್ತು ಆರೋಗ್ಯಗಳ ಬಗ್ಗೆ ವಿಚಾರಿಸಬೇಕು. ಇವುಗಳ ಬಗ್ಗೆ ಕಾಶ್ಯಪನು ತುಂಬ ಸ್ವಾರಸ್ಯವಾಗಿ ಬರೆದಿದ್ದಾನೆ.

"ಸೃಷ್ಟಿಯ ಆದಿಯಲ್ಲಿ ಮಾನವನ ಜನ್ಮದಾತ, ಭೂಮಿಯ

ಬೇಡಿಕೆಯ ಮೇರೆಗೆ ವಿವಿಧ ಬೀಜಗಳನ್ನು ಸೃಷ್ಟಿಸಿ, ಇವುಗಳನ್ನು ಏನು ಮಾಡುವುದು? ಎಂದು ಚಿಂತಿಸತೊಡಗಿದ. ಅವನ ಚಿಂತೆಯನ್ನು ಕಂಡು ಮರುಕಗೊಂಡ ಭೂತಾಯಿಯು ಆನಂದದಿಂದ ಸೃಷ್ಟಿಕರ್ತನಿಗೆ ಹೀಗೆ ಹೇಳಿದಳು. "ಓ ದೇವನೇ, ನಿನ್ನಿಂದ ಸೃಷ್ಟಿಮಾಡಲ್ಪಟ್ಟ ಈ ವಿವಿಧ ಬೀಜಗಳನ್ನು ನನ್ನಲ್ಲಿ ಚೆಲ್ಲಿದರೆ ಅವು ನಿಸ್ಸಂಶಯವಾಗಿ ಬೇಗ ಮೊಳೆಯುತ್ತವೆ. ನೀನು ಹೀಗೆ ನೀಡುವುದರಿಂದ ಇಂದ್ರನ ಆಶೀರ್ವಾದ ಹಾಗೂ ಶಕ್ತಿಯಿಂದ ಪ್ರತಿ ವರ್ಷವೂ ಸಕಾಲಕ್ಕೆ ಮಳೆಯಾಗಲಿ. ನನ್ನ ಮೇಲಿರುವ ರೈತರು, ಶ್ರೀಸಾಮಾನ್ಯರು ಮತ್ತು ಇತರರು ಸಕಾಲಕ್ಕೆ ಮಳೆ ಬಂದಾಗ ಫಲವತ್ತಾದ ಭೂಮಿಯಲ್ಲಿ ಬೀಜ ಬಿತ್ತಿ ಸಮೃದ್ಧ ಫಸಲನ್ನು ಪಡೆಯಲಿ. ದೇವತೆಗಳು ಸಂತುಷ್ಟಗೊಳ್ಳಲಿ. ಅಧಿಕ ಆಹಾರ ನೀಡುವುದರಿಂದ ಜನ ಮತ್ತು ಅವರ ಅತಿಥಿಗಳು ಹಾಗೂ ಜಾನುವಾರುಗಳು ಸಂತುಷ್ಟರಾಗುತ್ತಾರೆ. ಯಜ್ಞಗಳನ್ನು ನಿರಾತಂಕವಾಗಿ ನಡೆಸಬಹುದು"ಎಂದು ಭೂದೇವಿ ಹೇಳಿದ ನಂತರ, ತಾವರೆಯ ಕಿರೀಟ ಧರಿಸಿದ ದೇವ ಹೇಳಿದ : "ಹಾಗೆಯೇ ಆಗಲಿ" ಎಂದು. ಅಂದಿನಿಂದ ಈ ಭೂಮಿಯ ಮೇಲಿರುವ ಚಾಣಾಕ್ಷ ರೈತರೆಲ್ಲ ವಿವಿಧ ರೀತಿಯ ಬೀಜಗಳನ್ನು ಎಚ್ಚರಿಕೆಯಿಂದ ಸಂಗ್ರಹಿಸಿ ಸಂರಕ್ಷಿಸಿಕೊಂಡು ಬಂದಿದ್ದಾರೆ

ಅಂದಿನ ದಿನಗಳಲ್ಲಿ ಭತ್ತವನ್ನು ಮುಖ್ಯಬೆಳೆಸೆಂದು ಪರಿಗಣಿಸಿ ಅದರಲ್ಲಿ ಸುಮಾರು 26 ಬಗೆಯವುಗಳನ್ನು ಗುರ್ತಿಸಿ ಅವುಗಳ ಗುಣವಿಶೇಷಗಳನ್ನು ಚರ್ಚಿಸಿದ್ದಾರೆ ಉದಾಹರಣೆಗೆ : ಸ್ವಾದು ವ್ರಹಿ-ತುಂಬ ಸಿಹಿಯಾದವುಗಳು ; ಸಮ್ಮಾರ ವ್ರಹಿ–ಬೇಯಿಸಿದ ಮೇಲೆ ಅಗುಳು ತುಂಬ ದಪ್ಪವಾಗುತ್ತದೆ ; ಕಾಳ ವ್ರಹಿ–ತುಂಬ

ಪುಷ್ಟಿದಾಯಕ; ಬಿಳಿ ವೃಹಿ ಮತ್ತು ಹಳದಿ ವೃಹಿ–ಔಷಧಯುಕ್ತ ಆದ್ದರಿಂದ ಹೊಟ್ಟೆಕಟ್ಟಿರುವುದನ್ನು ತಡೆಯುತ್ತದೆ.

ಸರಿಯಾದ ಋತು, ಹಾಗೂ ಸರಿಯಾದ ಭೂಮಿಯಲ್ಲಿ ವ್ಯವಸಾಯ ಮಾಡಿದರೆ, ಮತ್ತು ವಿವಿಧ ಬೆಳೆಗಳ ಬೀಜಗಳನ್ನು ಎಚ್ಚರಿಕೆಯಿಂದ ಸಂಗ್ರಹಿಸಿದರೆ ಶುಭದಾಯಕವೆಂದು ಹೇಳಿ ಹೆಸರು, ಉದ್ದು, ಕಡಲೆ, ಗೋಧಿ, ಎಳ್ಳು, ಸಂಬಾರ, ಜೀರಿಗೆ, ಸಾಸಿವೆ, ಮೆಣಸು, ಹರಳು, ಕುಂಬಳ ಬದನೆ, ಅರಿಶಿನ, ಶುಂಠಿ, ಸುವರ್ಣಗೆಡ್ಡೆ, ಪ್ರಕಂದಗಳು, ಏಲಕ್ಕಿ, ದ್ರಾಕ್ಷಿ, ನಾಗವಳ್ಳಿ, ಅತಿಮುಕ್ತ, ಶಮಿ, ದೇವದಾರು, ಸರೀಶ, ಅಶೋಕ, ದಾಳಿಂಬೆ, ಕಪಿತ್ಥ, ಅಶ್ವತ್ಥ, ಹಾಲವಾಣ, ಮುತ್ತುಗ, ಆಲ, ಮಾವು, ಅರ್ಜುನ, ಜುಜುಬೆ, ಕಿತ್ತಳೆ, ಬೊಂಬು, ವಾಟಿಕಡ್ಡಿ ಮುಂತಾದವು ಗಳನ್ನು ಉಪಹರಿಸಿದ್ದಾರೆ. ಹೀಗೆ ವಿವಿಧ ಬೆಳೆಗಳ ಬೀಜಗಳನ್ನು ಬ್ರಾಹ್ಮಣರೇ ಆಗಲಿ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಮಿಶ್ರ ಜಾತಿಯವರೇ ಆಗಲಿ ಕೊಂಡು, ಶೇಖರಿಸಿ ಅವುಗಳನ್ನು ಸರಿಯಾದ ರೀತಿಯಲ್ಲಿ ಹೊಲಗಳಲ್ಲಿ ಬಿತ್ತಿ, ಬೆಳವಣಿಗೆಯನ್ನು ಉತ್ತೇಜಿಸಲು ಸಕಾಲದಲ್ಲಿ ನೀರು ಹಾಕಿ ಪೋಷಿಸಿದರೆ ರೈತರಿಗೆ ಯಶೋಲಾಭ ವುಂಟಾಗುತ್ತದೆ ಎಂದು ಬರೆದಿದ್ದಾರೆ.

**ಹಸನುಗೊಳಿಸುವಿಕೆ**

ಎತ್ತುಗಳ ಸಹಾಯದಿಂದ ಭೂಮಿಯ ಉಳುಮೆ ಮಾಡ ಬೇಕು. ತುಂಬ ಚೆನ್ನಾಗಿ ಹದಮಾಡಿದ ಭೂಮಿಗೆ ನೀರು ಬಿಟ್ಟು ಬೀಜ ಬಿತ್ತಲು ಯೋಗ್ಯವಾಗುವಂತೆ ಮಾಡಿ, ಬೀಜಗಳು ಅಥವ ಸಸಿಗಳನ್ನು ಅಂತರವಿಟ್ಟು ನೆಡಬೇಕು.

ಮೂಲಂಗಿ ಬೆಳೆಗೆ ಭೂಮಿಯನ್ನು ಹದಿನಾರು ಬಾರಿಯೂ ಹತ್ತಿಗೆ ಇದರಲ್ಲಿ ಅರ್ಧ ಅಂದರೆ ಎಂಟು ಬಾರಿ, ಭತ್ತಕ್ಕೆ ನಾಲ್ಕು ಬಾರಿ ಮತ್ತು ಎಲೆ ಹಂಬಿಗೆ ಒಂದು ಸಾರಿಯೂ ಬೇಡ, ಎಂದು ಹೇಳಿ, ಮೂಲಂಗಿ ಬೆಳೆಯಲು ಭೂಮಿ ಹತ್ತಿಯಷ್ಟು ಮೃದುವಾಗಿ ಇರಬೇಕು ಮತ್ತು ಕಬ್ಬಿಗೆ ಧೂಳಿನಂತಿರಬೇಕೆಂದು ಹೇಳಿದ್ದಾರೆ.

ವಿವಿಧ ಬೀಜಗಳು ಅಥವಾ ಬೆಳೆಗಳ ಆಧಾರದ ಮೇಲೆ ಭೂಮಿಯನ್ನು ಹಸನುಗೊಳಿಸಬೇಕು ಎಂದು ಹೇಳಿ, ಕೆಲವು ಬೆಳೆಗಳಿಗೆ ಉಳುಮೆ; ಮತ್ತೆ ಕೆಲವಕ್ಕೆ ಅಗೆಯುವಿಕೆ; ಬೇರು, ಲಶುನ ಮುಂತಾದವುಗಳಿಂದ ಅಭಿವೃದ್ಧಿ ಹೊಂದುವ ಗಿಡಗಳಿಗೆ ಗುಳಿ ತೋಡಬೇಕೆಂದು ಕಾಶ್ಯಪ ಅಭಿಪ್ರಾಯಪಟ್ಟಿದ್ದಾನೆ.

## ವಿವಿಧ ಬೆಳೆಗಳನ್ನು ಬೆಳೆಯುವಿಕೆ

ಭತ್ತವನ್ನು ಬೆಳೆಯಲು ಮೊದಲು ಬಟ್ಟಲಿನಲ್ಲಿ ಪ್ರತ್ಯೇಕವಾಗಿ ಸಸಿಗಳನ್ನೆಬ್ಬಿಸಿ ಅವುಗಳನ್ನು ಕಿತ್ತು, ಸಣ್ಣಸಣ್ಣ ಕಂತೆಗಳಾಗಿ ಕಟ್ಟಿ ಶುಭಗಳಿಗೆಯೊಂದರಲ್ಲಿ ಆಳುಗಳಿಂದ ಗದ್ದೆಯಲ್ಲಿ ನಾಟಿ ಮಾಡಿಸಬೇಕು. ನಾಟಿ ಮಾಡುವ ಸಮಯದಲ್ಲಿ ಗದ್ದೆಯಲ್ಲಿ ಹೆಚ್ಚು ನೀರು ನಿಲ್ಲದಂತೆ ಎಚ್ಚರವಹಿಸಬೇಕು ಎಂದು ಹೇಳಿದ್ದಾನೆ; ನಾಟಿ ನೆಟ್ಟನಂತರ ರೈತನು ಹುಲ್ಲು, ಕಳೆ ಮುಂತಾದವುಗಳನ್ನು ಕ್ರಮಬದ್ಧವಾಗಿ ನಾಶಮಾಡಬೇಕು. ಇಂಥ ಪೀಡೆಗಳು ಹೆಚ್ಚಿದರೆ ಪ್ರತಿದಿನವೂ ತೆಗೆಯಲು ಹೇಳಬೇಕು. ಹೀಗೆ ಮಾಡುವುದರಿಂದ ಪರಾವಲಂಬಿಗಳು ನಾಶವಾಗಿ ಗದ್ದೆಗಳು ಸುಂದರವಾಗುತ್ತವೆ. ಸೊಂಪಾಗಿ ಬೆಳೆದ ಪೈರಿನಲ್ಲಿ ಸ್ವಲ್ಪಕಾಲದ ನಂತರ ತೆನೆ ಬಂದು ಹಾಲು ತುಂಬುತ್ತದೆ. ಆಗ ಪಾರಿವಾಳಗಳು ಮತ್ತು ಹಕ್ಕಿಗಳಿಂದ

ರಕ್ಷಿಸಬೇಕು. ಕ್ರಮೇಣ ಕಾಳುಗಳು ಬಲಿತು ಗಟ್ಟಿಯಾಗುತ್ತವೆ. ಇಲ್ಲಿಯವರೆವಿಗೂ ಕ್ರಮವಾಗಿ ನೀರು ಹಾಯಿಸುವುದು ಲಾಭಕರ. ಇಲ್ಲವಾದಲ್ಲಿ ಬೆಳೆಯು ನಷ್ಟವಾಗಬಹುದು.

ಬೆಳೆಯನ್ನು ಇಲಿ, ಮಿಡತೆ, ಪಾರಿವಾಳ ಮತ್ತು ಇತರ ಪ್ರಾಣಿಗಳಿಂದ ರಕ್ಷಿಸುವುದು ಬಹಳ ಲಾಭಕರ. ಕಾಂಡಗಳು ಬಲಿತು ಅವುಗಳ ತೆನೆಗಳು ಬಾಗುತ್ತವೆ. ಆಗ ಹೊನ್ನವರ್ಣದ ಕಾಳುಗಳನ್ನು ಕಾಣಬಹುದು. ಇಂಥ ಕಾಲದಲ್ಲಿ ಬೆಳೆಯನ್ನು ಕೊಯ್ಯಬೇಕು. ಕೊಯ್ದ ಬೆಳೆಯನ್ನು ಆಳುಗಳ ಕೈಯಲ್ಲಿ ಗುಡ್ಡೆಮಾಡಿಸಿ, 3–4 ದಿನಗಳವರೆಗೆ ಇರಿಸಬೇಕು ಹೀಗೆ ಮಾಡಿದರೆ ಕಾಳುಗಳು ಸಡಿಲಗೊಂಡು ಭೂಮಿಗೆ ಬಿದ್ದು ಮುತ್ತಿನ ರಾಶಿಯಂತೆ ಮಿನುಗುತ್ತವೆ. ಉಳಿದ ಹುಲ್ಲನ್ನು ಎತ್ತು ಮತ್ತು ಎಮ್ಮೆಗಳ ಕಾಲಿನಲ್ಲಿ ತುಳಿಸುವುದರಿಂದ ಉಳಿದ ಕಾಳುಗಳೂ ಬಿದ್ದುಹೋಗುತ್ತವೆ. ಹೀಗೆ ಕಣಕ್ಕೆ ಬಿದ್ದ ಕಾಳುಗಳಲ್ಲಿ ಕಳಪೆಯವುಗಳನ್ನು ಉತ್ತಮವಾದವುಗಳಿಂದ ಬೀಸಣಿಕೆಯಿಂದ ತೂರಿ ಬೇರ್ಪಡಿಸಬೇಕು. ಉತ್ತಮವಾದವುಗಳಲ್ಲಿನ ಅಶುದ್ಧತೆಯನ್ನು ತೆಗೆದು ಬಿಸಿಲಿನಲ್ಲಿ ಒಣಗಿಸಬೇಕು. ಹೀಗೆ ದೊರೆತ ಧಾನ್ಯದಲ್ಲಿ ಒಂದು ಭಾಗವನ್ನು ದೇವತೆಗಳಿಗೆ, ಒಂದು ಭಾಗವನ್ನು ರಾಜನಿಗೆ, ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ಇನ್ನೊಂದು, ಆಳುಗಳಿಗೆ ಮತ್ತೊಂದು ಹೀಗೆ ಹಂಚಿ ಮಿಕ್ಕುಳಿದ ಭಾಗವನ್ನು ಅವನ ಮನೆಯಲ್ಲಿ ಸಂಗ್ರಹಿಸಬೇಕು.

ಸಂಗ್ರಹಣೆ ಮಾಡಲು ಚೆನ್ನಾಗಿ ಬೇಯಿಸಿದ ಕುಂಭಗಳು, ಪಾತ್ರೆಗಳು, ಮಣ್ಣಿನಿಂದ ಮೆತ್ತಲ್ಪಟ್ಟ ಹುಲ್ಲಿನ ಚೀಲಗಳು ಅಥವಾ ಆ ಭಾಗದಲ್ಲಿ ಪ್ರಚಲಿತವಿರುವ ಕಣಜಗಳಲ್ಲಿ ಶೇಖರಿಸಬೇಕು

ಅಥವಾ ಗಟ್ಟಿಯಾದ ನೆಲವಲ್ಲಿ ಒಂದುಕಡೆ ಹಳ್ಳವನ್ನು ತೋಡಿ ಅವರೊಳಗೆ ಪೆಟ್ಟಿಲುಗಳನ್ನು ಮಾಡಿ ಧಾನ್ಯವನ್ನು ತುಂಬಬೇಕು ಮತ್ತು ಇವನ್ನು ಶತ್ರು, ಕಳ್ಳರು, ಇಲಿ, ಗಿಳಿಗಳು ಮತ್ತು ಇತರ ಹಾನಿಕರ ಪ್ರಾಣಿಗಳಿಂದ ರಕ್ಷಿಸಲು ಎಚ್ಚರವಹಿಸಬೇಕು.

## ತರಕಾರಿಗಳು

ತರಕಾರಿಗಳ ಬಗ್ಗೆ ಕಾಶ್ಯಪ ಚರ್ಚಿಸುತ್ತಾ, ಭತ್ತ ಮುಂತಾದ ಬೆಳೆಗಳಿಗೆ ಮೊದಲನೆ ಸ್ಥಾನ, ಬೇಳೆಗಳಿಗೆ ಎರಡನೆಯ ಸ್ಥಾನ, ತರಕಾರಿಗಳಿಗೆ ಮೂರನೆಯ ಸ್ಥಾನ, ತುಪ್ಪ, ಹಾಲು, ಮೊಸರು ಇತ್ಯಾದಿಗಳಿಗೆ ನಾಲ್ಕನೆಯ ಸ್ಥಾನವನ್ನು ನೀಡಿದ್ದಾನೆ ಅಲ್ಲದೆ ಈ ನಾಲ್ಕು ಘಟಕಗಳೂ ಸಹ ಆಹಾರದಲ್ಲಿ ಸೇರಿರಬೇಕು, ಹಾಗಿದ್ದರೆ ಮಾತ್ರ ಅದು ಪೂರ್ಣ ಆಹಾರವೆನಿಸಿಕೊಳ್ಳಲು ಅರ್ಹ ಎಂದು ಹೇಳಿ, ಇಂಥ ಆಹಾರದ ಸೇವನೆಯಿಂದ ಪೋಷಕಾಂಶಗಳು ದೊರಕಿ ಆರೋಗ್ಯ ಮತ್ತು ಆಯುಷ್ಯ ಹೆಚ್ಚುತ್ತದೆ, ದೇವತೆಗಳು ಸಂತುಷ್ಟಗೊಳ್ಳುತ್ತಾರೆ ಹಾಗೂ ಇದು ಮಾನವರ ಬದುಕಿನ ಜೀವಾಳ ಎಂದು ಬರೆದಿದ್ದಾನೆ.

ತರಕಾರಿಗಳನ್ನು ಹಳ್ಳಪ್ರದೇಶಗಳಲ್ಲಿ ಮಳೆಗಾಲವನ್ನು ಹೊರತು ಮಿಕ್ಕೆಲ್ಲ ಋತುಗಳಲ್ಲೂ ಬೆಳೆಯಬಹುದು ಎಂದೂ, ಬಾಳೆ, ಕಬ್ಬು, ವೀಳೆಯದೆಲೆ, ಅಡಿಕೆ ಮುಂತಾದವುಗಳನ್ನು ಹಳ್ಳ ಪ್ರದೇಶ, ತೋಟ ಅಥವಾ ಮನರಂಜನಾ ಪ್ರದೇಶಗಳಲ್ಲಿ ಬೆಳೆಯ ಬಹುದು. ಬಾಳೆ, ಹಲಸು, ಮಾವು, ತೆಂಗು ಮುಂತಾದವುಗಳನ್ನು ಕೈತೋಟ ಅಥವಾ ತೋಟಗಳಲ್ಲಿ ಬೆಳೆಯಬಹುದು.

ಭೂಮಿಯನ್ನು ಮೊದಲು ಉತ್ತು ಅದರ ಫಲವತ್ತತೆಯನ್ನು ಹೆಚ್ಚಿಸಲು ಸಗಣಿಯನ್ನು ಹಾಕಬೇಕು. ಅನಂತರ ಬಸಿಕಾಲುವೆ ಗಳು ಮುಂತಾದವುಗಳನ್ನು ಮಾಡಿ ಬದನೆ ಮುಂತಾದ ತರಕಾರಿ ಗಳನ್ನು ನೆಡಬೇಕು. ನೆಟ್ಟ ಸುಮಾರು ಒಂದು ತಿಂಗಳ ನಂತರ ಅವುಗಳ ಬುಡದಲ್ಲಿರುವ ಕಳೆಗಳನ್ನು ನಾಶಪಡಿಸಬೇಕು.

## ರಾಜನ ಕರ್ತವ್ಯಗಳು

ಹಳ್ಳಿ ಮತ್ತು ಪಟ್ಟಣಗಳಲ್ಲಿ ವಾಸ ಮಾಡತಕ್ಕ ಆದರೆ ವ್ಯವಸಾಯ ಮಾಡಲು ಸಾಧ್ಯವಾಗದಂಥ ಜನಗಳಿಗೋಸ್ಕರ ರಾಜನು ಪ್ರತ್ಯೇಕವಾಗಿ ಆಳುಗಳನ್ನಿಟ್ಟು ವ್ಯವಸಾಯ ಮಾಡಿಸ ಬೇಕು. ಅವರುಗಳಿಂದ ಬೆಳೆಯನ್ನು ಸಂಗ್ರಹಿಸಿ ಧಾನ್ಯ, ತರ ಕಾರಿ, ಹಣ್ಣು ಹಂಪಲುಗಳನ್ನು ಸುಲಭ ದರದಲ್ಲಿ ಮಾರಾಟ ಮಾಡಬೇಕು. ಇವುಗಳ ಜೊತೆಗೆ ಪೂಜೆ, ಮರಮುಟ್ಟುಗಳು, ಪುಷ್ಪಗಳು ಮುಂತಾದವುಗಳಿಗಾಗಿ ಮರಗಿಡಗಳನ್ನು ಬೆಳೆಸಬೇಕು: ಪ್ರಜೆಗಳ ಹಿತರಕ್ಷಣೆಗೆ ಮತ್ತು ಸಾಮ್ರಾಜ್ಯದ ರಕ್ಷಣೆಗೆ ಸಹಾ ಸೈನಿಕರನ್ನಿಟ್ಟು ಕೃತಕವಾಗಿ ಕಾಡುಗಳನ್ನು ಬೆಳೆಸುವುದು ರಾಜನ ಆದ್ಯ ಕರ್ತವ್ಯವಾಗಿತ್ತು.

ಭೂಮಿಯ ಮೇಲಣ ದ್ವಿಪಾದಿ ಚತುಷ್ಪಾದಿಗಳೆಲ್ಲವೂ ವ್ಯವಸಾಯವಿಲ್ಲದಿದ್ದರೆ ಕಷ್ಟವನ್ನೆದುರಿಸಬಹುದು. ದೇವತೆ ಗಳನ್ನು ಸುಪ್ರೀತರನ್ನಾಗಿ ಮಾಡಲು ರಾಜನು ವ್ಯವಸಾಯದಲ್ಲಿ ಬಹಳ ಮುತುವರ್ಜಿ ವಹಿಸಬೇಕು. ರಾಜನಲ್ಲದೇ ಬ್ರಾಹ್ಮಣರು, ಪೂಜಾರಿಗಳು ಮತ್ತು ಮಂತ್ರಿಗಳೂ ಸಹಾ ವ್ಯವಸಾಯ ನಿರತ ರಾಗಬೇಕು.

ಎಲ್ಲ ಕಸುಬುಗಳಿಗಿಂತಲೂ ವ್ಯವಸಾಯವೇ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದ್ದುದರಿಂದ ಪ್ರಜೆಗಳನ್ನು ರಕ್ಷಿಸುವ ಹೊಣೆಯನ್ನು ಹೊತ್ತ ಕ್ಷತ್ರಿಯ ದೊರೆಯು, ದೇಶದಲ್ಲಿ ವ್ಯವಸಾಯ ಕಸುಬನ್ನು ಸರಿಯಾಗಿ ನೋಡಿಕೊಳ್ಳಬೇಕು. ಹಳ್ಳಿ, ಪಟ್ಟಣ ಅದರಲ್ಲೂ ರಾಜಧಾನಿಗಳಲ್ಲಿ ಉದ್ಯಾನವನಗಳನ್ನೂ, ಪಟ್ಟಣದ ಹೊರವಲಯ ಹಾಗೂ ಒಳವಲಯಗಳಲ್ಲಿ ತೋಪನ್ನೂ, ಅಂತಃಪುರದ ಸ್ತ್ರೀಯರಿಗಾಗಿಯೇ ಪ್ರತ್ಯೇಕವಾಗಿ ಒಂದು ಕೈತೋಟವನ್ನು ನಿರ್ಮಿಸಬೇಕು ಎಂದು ನಿಖರವಾಗಿ ನಿರ್ದೇಶಿಸಲ್ಪಟ್ಟಿತ್ತು.

ವ್ಯಾಪಾರದಲ್ಲಿ ಉತ್ತಮ ಜ್ಞಾನವಿರುವ ವಣಿಕರನ್ನು ನೇಮಿಸಿ ಬೆಳೆಯಿಂದ ಬಂದ ಉತ್ಪತ್ತಿಯನ್ನು ಮಾರಾಟ ಮಾಡಿಸಬೇಕು, ಇವುಗಳ ಜೊತೆಗೆ ಅಳೆಯುವ, ತೂಕಮಾಡುವ ಸಲಕರಣೆಗಳು ಮತ್ತು ದರಗಳಬಗ್ಗೆ ರಾಜನು ನೇರ ನಿಯಂತ್ರಣವನ್ನು ಏರ್ಪಡಿಸಬೇಕು ಎಂದು ಅನೇಕ ಕಡೆಗಳಲ್ಲಿ ಹೇಳಲಾಗಿದೆ.

## ಹವಾಮಾನ

ವ್ಯವಸಾಯ, ಪ್ರಕೃತಿಯ ಘಟನೆಗಳಿಗೆ ನೇರವಾಗಿ ಒಡ್ಡಲ್ಪಟ್ಟಿರುವ ಕಸುಬು. ವಾತಾವರಣದ ವೈಪರೀತ್ಯತೆಗಳನ್ನು ಊಹಿಸುವುದು ಸ್ವಲ್ಪ ಕಷ್ಟ. ಆದರೆ, ನಮ್ಮ ಪೂರ್ವಜರು, ಇಂಥ ಏರಿಳಿತಗಳನ್ನು ಗಾಳಿಯ ಚಲನೆ, ಸೂರ್ಯ ಚಂದ್ರರ ಪಥ, ನಕ್ಷತ್ರಗಳು ಮುಂತಾದವುಗಳಿಂದ ನಿಖರವಾಗಿ ಊಹಿಸುತ್ತಿದ್ದರು. ಉದಾಹರಣೆಗೆ: ಕಾರ್ತಿಕ ಅಥವಾ ಮಾರ್ಗಶಿರಗಳಲ್ಲಿ ಸೂರ್ಯನು ಒಂದು ರಾಶಿಯಿಂದ ಮತ್ತೊಂದಕ್ಕೆ ಹೋಗುವಾಗ ಮಳೆ ಬಿದ್ದರೆ ಫಸಲು ಸಾಧಾರಣ, ಪುಷ್ಯ ಮಾಸದಲ್ಲಿ ಮಳೆ ಬಿದ್ದರೆ ಫಸಲು ಅಧಿಕ ಎಂದು ತಿಳಿಸಿದ್ದಾರೆ.

ಬೀಜಗಳನ್ನು ಶ್ರಾವಣ, ಶತಭಿಷ, ಪುನರ್ವಸು ಮತ್ತು ವೈಶಾಖಗಳಲ್ಲಿ ಮಂಗಳವಾರದ ವಿನಹ ಬಿತ್ತುವುದು ಒಳ್ಳೆಯದು. ಶುಕ್ರನು ಪ್ರಬಲನಾಗಿದ್ದು, ಕುಜನು ಲಗ್ನಸ್ಥಾನದಲ್ಲಿದ್ದು, ಚಂದ್ರ ಪೂರ್ವಾಷಾಢದಲ್ಲಿದ್ದು, ಕ್ರೂರ ನಕ್ಷತ್ರಗಳು ಅಶಕ್ತವಾಗಿದ್ದಾಗ ಬೇಸಾಯವನ್ನು ಆರಂಭಿಸಬೇಕು

ಸೂರ್ಯನು ಮಕರ ರಾಶಿಯನ್ನು ಪ್ರವೇಶ ಮಾಡಿದಾಗ ಬೇಸಾಯ ಮಾಡಿದರೆ ಪಶುಗಳಿಗೆ ಹಾನಿ ಕಟಕ ರಾಶಿಯಲ್ಲಿ ನೀರಿನಿಂದ ಭಯ, ಸಿಂಹದಲ್ಲಿ ಬೆಳಸಿಗೆ ಧಕ್ಕೆ, ತುಲಾದಲ್ಲಿ ನೇಗಿಲು ನಾಶ, ಕುಂಭದಲ್ಲಿ ಕಳ್ಳಕಾಕರಿಂದ ಭಯವನ್ನು ಸೂಚಿಸುತ್ತದೆ. ಹಸ್ತ, ಅಶ್ವಿನಿ, ಪುಷ್ಯ, ಉತ್ತರ, ರೋಹಿಣಿ, ಚೈತ್ರ, ಅನುರಾಧ, ಮೃಗಶಿರ, ರೇವತಿ, ಸ್ವಾತಿ, ಧನಿಷ್ಠ, ಮಾಘ ಮತ್ತು ಮೂಲ ಗಳಲ್ಲಿ ಬೀಜ ಬಿತ್ತುವುದರಿಂದ ಯಥೇಚ್ಛ ಬೆಳೆಯೊದಗುತ್ತದೆ ವಸಿಷ್ಠರು "ಸೂರ್ಯನು ಆರಿದ್ರದೊಡನಿದ್ದಾಗ ಪುಷ್ಯ, ಆಶ್ಲೇಷ ಮಾಘ, ಪೂರ್ವ ಫಾಲ್ಗುಣಿ, ಹಸ್ತ, ಚಿತ್ರಾ, ಸ್ವಾತಿಗಳು ಶುಭ ಮುಂದಿನ ವೈಶಾಖ, ಅನುರಾಧ, ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ತರಾಷಾಢ, ಅಭಿಜಿತ್, ಶ್ರಾವಣ ಮತ್ತು ಧನಿಷ್ಠಗಳು ಅಶುಭ. ನಂತರ ಶತಭಿಷ, ಪೂರ್ವಭಾದ್ರಪದ, ಉತ್ತರಭಾದ್ರಪದ, ರೇವತಿ, ಅಶ್ವನಿ, ಭರಣಿ, ಕೃತಿಕ ಮತ್ತು ರೋಹಿಣಿಗಳು ಶುಭ" ಎಂದಿದ್ದಾರೆ

## ಬೆಳಸು ಕ್ರಮಗಳು

ಒಂದು ನಿರ್ದಿಷ್ಟ ತುಣುಕು ಭೂಮಿಯಲ್ಲಿ ಒಂದೇ ಬೆಳೆ ಯನ್ನು ಬಹಳ ಕಾಲದವರೆಗೂ ಬೆಳೆಯುತ್ತಹೋದಲ್ಲಿ ಭೂಮಿಯ

ಮೇಲೆ ಆ ಬೆಳೆಯು ತನ್ನದೇ ಆದ ಸಾರವನ್ನು ಬಿಡುತ್ತದೆ ಅಥವಾ ಆ ಬೆಳೆಗೇ ಸೀಮಿತವಾಗಿರುವ ರೋಗ ರುಜಿನ ಮತ್ತು ಕೀಟಗಳು ಹೆಚ್ಚಬಹುದು. ಆದ್ದರಿಂದ ಬೆಳೆಗಳನ್ನು ಪರಿವರ್ತಿಸುವುದು ಅತ್ಯಗತ್ಯ. ಈ ರೀತಿಯ ಪರಿವರ್ತನೆಯು ಪ್ರಾಚೀನ ಕಾಲದಲ್ಲಿ ಇತ್ತು ಎಂಬುವಕ್ಕೆ ವಿಪುಲ ಉದಾಹರಣೆಗಳಿವೆ.

ತೈತ್ತರೀಯ ಸಂಹಿತೆಯಲ್ಲಿ ಭತ್ತ ಮತ್ತು ಎಳ್ಳನ್ನು ಮೊದಲ ಬೆಳೆಯಾಗಿಯೂ, ಹೆಸರು ಮತ್ತು ಉದ್ದುಗಳನ್ನು ಎರಡನೆಯ ಬೆಳೆಯಾಗಿಯೂ, ಕುಸುಮ, ಹುರುಳಿ, ಬಾರ್ಲಿ, ಗೋಧಿ, ಅಗಸೆ ಮತ್ತು ಸಾಸಿವೆಗಳನ್ನು ಹಿಂಗಾರಿನಲ್ಲಿಯೂ ಬಿತ್ತಬೇಕೆಂದು ಹೇಳಲಾಗಿದೆ. ಅರ್ಥಶಾಸ್ತ್ರದಲ್ಲಿ ಒಂದೇ ವರ್ಷದಲ್ಲಿ ಎರಡನೇ ಬೆಳೆಯನ್ನು ಬೆಳೆಯುವುದು ನಿಷಿದ್ಧ. ಆದರೆ, ತೆರಿಗೆ ಕಟ್ಟಲು ಸಾಧ್ಯವಾಗದಿದ್ದ ಪಕ್ಷಕ್ಕೆ ಕೊನೆಯ ಉಪಾಯವಾಗಿ ಬೆಳೆಯಬಹುದು ಎಂಬ ವಿನಾಯಿತಿ ಇತ್ತು.

ಬೆಳೆಗಳನ್ನು ಹೀಗೆ ಬೆಳೆಯುವುದಕ್ಕೆ ಮೊದಲು ಯಾವ ಬೆಳೆಗೆ ಎಷ್ಟು ಮಳೆ, ಯಾವ ಕಾಲದಲ್ಲಿ ಬೇಕು, ಹಾಗೂ ಆ ವರ್ಷದಲ್ಲಿ ಯಾವ ಮಳೆ ಸಮೃದ್ಧವಾಗಿ ಬೀಳುತ್ತದೆ ಎಂಬುದನ್ನು ತೋರಿಸುವ ಹವಾಮಾನ ಪಟ್ಟಗಳ ಆಧಾರದ ಮೇಲೆ ಬೆಳೆಗಳನ್ನು ಬೆಳೆಯಲು ರೈತರಿಗೆ ಸೂಚನೆಯನ್ನು ನೀಡಲಾಗುತ್ತಿತ್ತು.

## ಸಸ್ಯ ಸಂರಕ್ಷಣೆ

ಸಸ್ಯಗಳು ರೋಗ, ಅನೇಕ ಕೀಟಗಳು, ಹಾನಿಕಾರಕ ಪ್ರಾಣಿಗಳು ಮತ್ತು ಅನೇಕ ಪಿಡುಗುಗಳಿಗೆ ತುತ್ತಾಗುತ್ತವೆ

ಇವುಗಳನ್ನು ತಡೆದರೆ ಬೆಳೆಯು ಸೊಂಪಾಗಿ ಬೆಳೆದು ಅಧಿಕವಾಗಿ ಉತ್ಪತ್ತಿಯನ್ನು ನೀಡಬಲ್ಲುದು. ಅನೇಕ ರೋಗಗಳು ಯಾವುದರಿಂದ ಉತ್ಪತ್ತಿಯಾಗುತ್ತವೆ ಹಾಗೂ ಕೀಟಗಳನ್ನು ನಿಖರವಾಗಿ ಹೇಗೆ ತಡೆಯಬಹುದು ಎಂಬುದಕ್ಕೆ ಬಹುಶಃ ಪೂರ್ಣವಾದ ಅನುಭವವಿಲ್ಲದುದರಿಂದಲೋ ಏನೋ, ಸಸ್ಯಸಂರಕ್ಷಣೆಯ ಬಗ್ಗೆ ಅಂಥ ಪಾಂಡಿತ್ಯಪೂರ್ಣವಾದ ಹೇಳಿಕೆಗಳು ಕಾಣಬರುವುದಿಲ್ಲ. ಆದರೂ ಸಹ ಸಸ್ಯಸಂರಕ್ಷಣೆಯು ಅನುಸರಿಸಲೇಬೇಕಾದ ಒಂದು ಮುಖ್ಯ ಅಂಗವೆಂಬುದು ಪೂರ್ವಿಕರಿಗೆ ತಿಳಿದಿತ್ತು. ಸಸ್ಯಸಂರಕ್ಷಣೆಯ ಬಗೆಗಿನ ಅವರ ದೃಷ್ಟಿಯು ಇಂದಿನ ದೃಷ್ಟಿಯಲ್ಲಿ ನಗೆಪಾಟಲಾಗಬಹುದು ಆದರೆ ಮಾರಕ ಶತ್ರುಗಳಾದ ಕೀಟ ಹಾಗೂ ರೋಗಗಳ ಬಗ್ಗೆ ಅವರಿಗಿದ್ದ ಅರಿವನ್ನು ಅಲ್ಲಗಳೆಯಲಾಗದು.

ಅಥರ್ವಣವೇದದಲ್ಲಿ ಅನೇಕ ಮಾರಕ ಪೀಡೆಗಳ ಪಟ್ಟಿಯನ್ನು ನೀಡಿದ್ದಾರೆ. ಅವುಗಳನ್ನು ನಾಶಮಾಡಲು ಈ ವಿಧಾನವನ್ನು ಹೇಳಲಾಗಿದೆ: ಮಂತ್ರ ಪಠಿಸುತ್ತ ಕಬ್ಬಿಣದ ನೇಗಿಲಿನಿಂದ ಹೊಲವನ್ನು ಉಳುತ್ತಿರಬೇಕು. ಅಲ್ಲಿ ಇಲ್ಲ ಕಲ್ಲುಗಳನ್ನು ಎರಚಿ, ಹೊಲಕ್ಕೆ ಬಿದ್ದಿರುವ ಕೀಟದ ಬಾಯನ್ನು ಕೂದಲಿನಿಂದ ಕಟ್ಟಿ ತಲೆಕೆಳಗು ಮಾಡಿ ಹೊಲದ ಮಧ್ಯಭಾಗದಲ್ಲಿ ಹೂಳಬೇಕು. ಆಗಲೇ ಒಂದೇ ಬಣ್ಣದ ಹಸು ಮತ್ತು ಕರುವಿನ ಹಾಲನ್ನು ಅಶ್ವಿನೀ ದೇವತೆಗಳಿಗರ್ಪಿಸಬೇಕು. ಹೀಗೆ ಪೂಜೆ ಮಾಡಿದ ದಿನ ಸಂಜೆಯ ವರೆಗೂ ಮೌನಧಾರಿಯಾಗಿರಬೇಕು.

ದನಗಳು ಬೆಳೆಗಳನ್ನು ಹಾಳುಮಾಡುವುದು ಅಪರಾಧವೆಂದು ಪರಿಗಣಿಸಲಾಗಿತ್ತು. ಹಸು ಬೆಳೆಯನ್ನು ನಾಶಮಾಡಿದರೆ ಒಂದು

ಮಾಸ ಶಿಕ್ಷೆ, ಎಮ್ಮೆಗೆ ಎರಡು ಮಾಸ, ಕುರಿ ಮತ್ತು ಮೇಕೆಗಳು ಬೆಳೆಯ ಮಧ್ಯೆ ಹಾದುಹೋದರೆ ಅರ್ಧ ಮಾಸ ಶಿಕ್ಷೆ ಅಥವಾ ಎಂದು ತೆರಿಗೆ ವಿಧಿಸುತ್ತಿದ್ದರು. ಇಂಥ ದಂಡವನ್ನು ತೆರದಿದ್ದರೆ, ದಂಡ ಕೊಡುವ ವರೆಗೂ ನಷ್ಟವನ್ನನುಭವಿಸಿದವನು ಪ್ರಾಣಿಗಳನ್ನು ಇಟ್ಟುಕೊಳ್ಳ ಬಹುದು ಎಂದು ನಾರದ ಸ್ಮೃತಿ, ವಿಷ್ಣು ಪುರಾಣ, ಯಜ್ಞವಲ್ಕ್ಯ ಸ್ಮೃತಿ ಮುಂತಾದೆಡೆಗಳಲ್ಲಿ ಹೇಳಲಾಗಿದೆ. ಇವುಗಳಿಗೆ ನಿವಾರಣೆಯು ಉದಾಹರಣೆಗೆ : ಬೇಲಿ ಇಲ್ಲದೇ ಇರುವ ಹೊಲಗಳಲ್ಲಿ ಗೋಮಾಳಕ್ಕೆ ತೀರ ಹತ್ತಿರವಿರುವ, ಹಳ್ಳಿಗೆ ಸಮೀಪದಲ್ಲಿರುವ, ಆಗ ತಾನೇ ಕರು ಹಾಕಿದ ಅಥವಾ ತಡೆಯಲು ದುಸ್ಸಾಧ್ಯವಾದ ದನಗಳಿಂದ ಇಂಥ ಹಾನಿಯಾದರೆ ದಂಡ ತೆರುವಹಾಗಿಲ್ಲ ಎಂದು ಹೇಳಲಾಗಿದೆ.

ಪೀಡೆಗಳನ್ನು ನಾಶ ಮಾಡಲು ವೃಕ್ಷಾಯುರ್ವೇದದಲ್ಲಿ ಸ್ವಾರಸ್ಯಕರವಾದ ಉಲ್ಲೇಖಗಳಿವೆ. ಉದಾಹರಣೆಗೆ : "ಇದು ಎಲ್ಲರಿಗೂ ಸಮರ್ಪಿತವಾಗಲಿ ! ಯಾವ ಹನುಮನು ಕಿಷ್ಕಿಂಧೆಯಲ್ಲಿ ತನ್ನ ಪರಾಕ್ರಮವನ್ನು ಮೆರೆದನೋ, ಆವನು ಇಲಿ, ಹಕ್ಕಿ, ಇರುವೆ ಮುಂತಾದವುಗಳಿಗೆ ಆಜ್ಞಾಪಿಸಿ ನಾಶಮಾಡುತ್ತಾನೆ". ಮಿಡತೆ, ಇಲಿ, ಹಕ್ಕಿ, ಇರುವೆ ಇತ್ಯಾದಿಗಳು ಬೆಳೆಯನ್ನು ಹಾಳು ಮಾಡುತ್ತವೆ ಎಂಬ ಭಯವಿದ್ದರೆ, ಮೇಲೆ ಹೇಳಿದ ಮಂತ್ರವನ್ನು ನೂರೆಂಟು ಬಾರಿ ಪಠಿಸಿ ಒಂದು ಮರದ ಎಲೆಯ ಮೇಲೆ ಬರೆದು ಜೊತೆಯಲ್ಲಿ ಮನು ಎಂಬ ಪದವನ್ನು ಬರೆಯಬೇಕು. ಇದನ್ನು ಭೂಮಿಯೊಳಕ್ಕೆ ಹೂಳುವುದರಿಂದ ಕೀಟ, ಇಲಿ ಮತ್ತು ಪಕ್ಷಿಗಳು ನಾಶ ಹೊಂದುತ್ತವೆ.

ಮನುಷ್ಯರಂತೆಯೇ ಸಸ್ಯಗಳು ಕೂಡ ವಾತ, ಪಿತ್ತ, ಕಫ ಗಳೆಂಬ ಮೂರು ವ್ಯಾಧಿಗಳಿಂದ ನರಳುತ್ತವೆ. ಈ ರೀತಿಯ ಅನಾರೋಗ್ಯವನ್ನು ಪರಿಶೀಲಿಸಿ ತಕ್ಕಹಾಗೆ ಉಪಚಾರ ಮಾಡ ಬೇಕು. ಪೀಡೆಗಳಿಂದ ತಿನ್ನಲ್ಪಟ್ಟ, ಬೆಂಕಿಯಿಂದ ನಾಶಗೊಂಡ, ಪ್ರವಾಹದಿಂದ ಮುರಿದ, ಸಿಡಿಲುಬಡಿದ ಮರಗಳನ್ನು ಕತ್ತರಿಸುವು ದೊಂದೇ ದಾರಿ. ಬೇರೆ ವ್ಯಾಧಿಗಳಿಗೆ ಬೇರೆ ಬೇರೆ ನಿವಾರಣೋ ಪಾಯಗಳಿವೆಯೆಂದು ಹೇಳಿ ವಿವಿಧ ರೋಗಗಳ ಗುಣಲಕ್ಷಣ ಗಳನ್ನು ಹೇಳಲಾಗಿದೆ. ವಾತಪೀಡಿತ ಮರವು ತೀರ ಎತ್ತರ ಅಥವಾ ತೀರ ಕುಳ್ಳಾಗಿರುತ್ತದೆ. ಕಡಿಮೆ ಚಟುವಟಿಕೆಯುಳ್ಳ ದ್ದಾಗಿರುತ್ತದೆ ಮತ್ತು ಹೂ ಹಣ್ಣುಗಳನ್ನು ಬಿಡುವುದಿಲ್ಲ. ಪಿತ್ಥ ದಿಂದ ನರಳುತ್ತಿದ್ದರೆ ಬಿಸಿಲು ಸಹಿಸಲಾರದು, ಬಿಳಚಿಕೊಂಡಿರು ತ್ತದೆ, ಕೊಂಬೆಗಳಿರುವುದಿಲ್ಲ ಹಾಗೂ ಕಾಯಿಗಳು ಅಕಾಲದಲ್ಲಿ ಹಣ್ಣಾಗುತ್ತವೆ. ಹೊಳೆಯುವ ಎಲೆಗಳಿದ್ದು, ಸುಂದರ ಹೂ ಗಳಿಂದ ತುಂಬಿದ್ದು, ಫಲಭರಿತವಾಗಿದ್ದು, ಕೇವಲ ಸುತ್ತುವರಿದ ಬಳ್ಳಿಗಳಿಂದಾಗಿ ಬಿಳಿಚಿಕೊಂಡಿದ್ದರೆ ಕಫಪೀಡಿತವಾಗಿದೆಯೆಂದು ತಿಳಿಯಬೇಕು.

ಮಾಂಸದ ರಸವನ್ನು ಹಾಕುವುದರಿಂದ ವಾತನಾಶ, ಮಧುರವಾದ ಶೀತಲ ಜಲದಿಂದ ಪಿತ್ಥನಾಶ ಮತ್ತು ಕಹಿಯಾದ ಆಮ್ಲೀಯ ದ್ರವ್ಯಗಳ ಹಾಗೂ ತಂಪಾದ ಜಲದ ಹವವರಿತ ಮಿಶ್ರಣವನ್ನು ನೀಡುವುದರಿಂದ ಕಫ ನಾಶವಾಗುತ್ತದೆ.

ಇದೇ ರೀತಿಯಿಂದ ಪೀಡೆಗಳನ್ನು ತಡೆಗಟ್ಟುವ ಕ್ರಮ ಗಳನ್ನು ಪರಾಶರರ ಕೃಷಿ ಪ್ರಸಾರದಲ್ಲಿ ಹೇಳಲಾಗಿದೆ.

"ಓಂ ಜಯವಾಗಲಿ ಗುರುವಿನ ಪಾದಗಳಿಗೆ ನಮಸ್ಕಾರ ಮಹಿಮಾನ್ವಿತ ರಾಮಚಂದ್ರನ ಪಾದಗಳಿಗೆ ವಂದನೆಗಳು ಉಫೇ; ಎಂದು ರಾಮಚಂದ್ರನನ್ನು ಪೂಜಿಸಿದ ನಂತರ; ರಾಮಚಂದ್ರನು ಆಂಜನೇಯನಿಗೆ, ಇಂಥ ಹಳ್ಳಿಯ, ಇಂಥ ಮನೆಯ, ಇಂಥ ಜಮೀನಿಗೆ ತ್ರಿಪೂತಿ ಎಂಬ ರಕ್ಕಸಿಯು ತನ್ನ ಏಳು ಮಕ್ಕಳಾದ ಭೊಂಭ, ಭೊಂಬಿ, ಪಂಡರಮುಖಿ, ಗಂಧಿ, ಧೂಳಿಶೃಂಗಿ ಇತ್ಯಾದಿ ಪೀಡೆಗಳ ಗುಂಪಿನಲ್ಲಿ ಬಂದು ಬೆಳೆಗೆ ಅನೇಕ ಬಗೆಯಲ್ಲಿ ಹಾನಿ ಮಾಡುತ್ತಿದ್ದಾಳೆ. ನೀನು, ಅವಳು ಅವಳ ಮಕ್ಕಳು ಹಾಗೂ ಬಂಧುಗಳನ್ನು ನಿನ್ನ ದಂಡದಂಥ ಬಾಲದಿಂದ ಹೊಡೆ, ನಿನ್ನ ಆ ಉಗುರುಗಳಿಂದ ಅವರೆಲ್ಲರನ್ನೂ ಸೀಳಿದ ನಂತರ ದಕ್ಷಿಣ ಸಮುದ್ರದ ಉಪ್ಪು ನೀರಿಗೆಸೆ. ಈ ಕಾರ್ಯದಲ್ಲಿ ನೀನು ಒಂದು ಕ್ಷಣ ತಡ ಮಾಡಿದರೂ ಸಹ ನಿನ್ನ ತಂದೆ ವಾಯು ಹಾಗೂ ತಾಯಿ ಅಂಜನಾ ದೇವಿಯಿಂದ ದೂಷಣೆ ಹೊಂದುವವನಾಗು, ಇಲ್ಲದಿದ್ದಲ್ಲಿ ನಾನು ನಿನ್ನ ಪ್ರಭುವಲ್ಲ ಅಥವಾ ನೀನು ನನ್ನ ಸೇವಕನೂ ಅಲ್ಲ ಓಂ ಘ್ರಂ, ಘ್ರಿಂ, ಘ್ರಿ!" ಈ ಮಂತ್ರವನ್ನು ತಾಳೆ ಎಲೆಯಮೇಲೆ 'ಏಳ್ಪ' ಮುಳ್ಳಿನಿಂದ ಬರೆದು ಒಂದು ಭಾನುವಾರ ತಲೆಗೂದಲನ್ನು ಇಳಿಬಿಟ್ಟು, ಜಮೀನಿನ ಈಶಾನ್ಯ ಮೂಲೆಯಲ್ಲಿ ಬೆಳೆಯ ಮಧ್ಯೆ ಹೂ ಬಿಟ್ಟಿರುವ ಗಿಡವೊಂದಕ್ಕೆ ಕಟ್ಟಬೇಕು ಎರಡನೆಯ ಪ್ರತಿ ಯೊಂದನ್ನು ಅರಗಿನ ಬಣ್ಣದಲ್ಲಿ ಬರೆದು ಬೆಳೆಗಳಿಗೆ ಕಟ್ಟಿದರೆ ಆ ಬೆಳೆಗೆ ರೋಗ, ಕೀಟ ಹಾಗೂ ದುಷ್ಟಪ್ರಾಣಿಗಳಿಂದ ಯಾವ ವಿಧವಾದ ಕೇಡೂ ಇರುವುದಿಲ್ಲ.

ನಿದ್ರಾಹೀನತೆ, ಬಿಳಚಿಕೊಂಡಿರುವಿಕೆ, ಎಲೆಯಿಲ್ಲದಿರುವಿಕೆ, ಕೊಂಬೆಗಳ ತುದಿ ಒಣಗಿರುವಿಕೆ, ಹಣ್ಣುಗಳ ದುರ್ವಾಸನೆ

ಮುಂತಾದವುಗಳು ಹೆಚ್ಚು ನೀರು ಹಾಕುವುದರಿಂದ ಉಂಟಾಗು ತ್ತವೆ. ಅಂಥ ಸಮಯಗಳಲ್ಲಿ ಬೇರುಗಳಿಗೆ ಸಣ್ಣ ಗಾಯಗಳನ್ನು ಮಾಡಿ ದುರ್ಜಲವು ಮರದ ಗಾಯಗಳಿಂದ ಸೋರಿಹೋಗುವಂತೆ ಮಾಡಬೇಕು. ಅನಂತರ ಗಾಯಗಳ ಮೇಲೆ ವಿಡಂಗವನ್ನು ತುಪ್ಪ ಮತ್ತು ಎಳ್ಳಿನೊಡನೆ ಲೇಪಿಸಿ ಮರದ ಬೊಡ್ಡೆಗೆ ಗೋಡು ಮತ್ತು ನೀರು ಮಿಶ್ರಿತ ಹಾಲನ್ನೆರೆದು ಪ್ರೋಕ್ಷಿಸಬೇಕು. ಹೀಗೆ ಮಾಡುವುದರಿಂದ ಮರವು ರೋಗಮುಕ್ತವಾಗಿ ಬದುಕುತ್ತದೆ.

ಗೊತ್ತಾದ ಯಾವುದೇ ನಿರ್ದಿಷ್ಟ ಕಾರಣವಿಲ್ಲದೆ ಮರದ ಎಲೆಗಳು ಬಿದ್ದುಹೋಗಿ, ಅವುಗಳ ಕೊನೆಗಳು ಒಣಗಿ ತೊಗಟೆಯು ಸುಲಿಯಲಾರಂಭಿಸಿದರೆ, ವರ್ಣರಹಿತವಾಗಿ, ಕ್ಷಿಪ್ರವಾಗಿ, ಬಾಡ ಲಾರಂಭಿಸಿದರೆ ಅದು ಕೀಟಗ್ರಸ್ತವಾಗಿದೆಯೆಂದು ತಿಳಿಯಬೇಕು.

ಕೀಟಗಳಲ್ಲಿ ಎರಡು ಬಗೆಯವುಗಳಿವೆ. ಒಳಗಿನಿಂದ ಆಕ್ರಮಿಸುವವುಗಳು ಮತ್ತು ಹೊರಗಿನಿಂದ ಆಕ್ರಮಣ ಮಾಡು ವವುಗಳು. ಹೊರಗಿನವುಗಳಲ್ಲಿ ಕೆಲವು ಎಲೆಗಳನ್ನೂ, ತೊಗಟೆ ಯನ್ನೂ, ಮತ್ತೆ ಕೆಲವು ಹೂ ಹಣ್ಣುಗಳನ್ನೂ ತಿನ್ನುತ್ತವೆ.

ಹೊರಗಿನಿಂದ ಆಕ್ರಮಣ ಮಾಡುವ ಕೀಟಗಳನ್ನು ತಡೆ ಯಲು ಅರಗ್ವದ, ಅರಿಷ್ಟ, ಕರಂಜ, ಸಪ್ತವರ್ಣ, ಚಕ್ಕೆ, ಜಂತು ರಿಪುಗಳ ಪುಡಿಯನ್ನು ಹಸುವಿನ ಮೂತ್ರದಲ್ಲಿ ಕರಗಿಸಿ ಒಂದು ರಾತ್ರಿ ನೆನೆಸಿ ಲೇಪಿಸಿದರೆ, ಹೊರಗಿನಿಂದ ಆಕ್ರಮಣ ಮಾಡುವ ಕೀಟಗಳು ನಾಶಹೊಂದುತ್ತವೆ.

ವಿಡಂಗ, ಬಿಳಿ ಸಾಸಿವೆ, ಕರಿಮೆಣಸು, ಮೆಣಸಿನಕಾಯಿ, ಒಣ ಶುಂಠಿ, ಭಲ್ಲಾಟ, ವಾಕೆಗಳನ್ನು ಹಸುವಿನ ಗಂಜಲದಲ್ಲಿ

ಅರೆದು ಅದನ್ನು ಕೊಂಬೆಗಳಿಗೆ ಲೇಪಿಸಿದರೆ ಅವುಗಳೊಳಗಣ ಕೀಟ ಗಳನ್ನು ನಾಶಮಾಡಿ ವೃಕ್ಷದ ತೊಗಟೆಯು ನೈಸರ್ಗಿಕ ವರ್ಣವನ್ನು ರಕ್ಷಿಸುತ್ತದೆ.

ಜ್ವಾಲೆ ತಗುಲಿದ ಮರವನ್ನು ಹಾಲು ಮತ್ತು ನೀರೆರೆದು ಪೋಷಿಸಿ, ಜೇನು, ತಾವರೆಯ ಬೇರುಗಳು ಮತ್ತು ಹಾಲಿನ ಮಿಶ್ರಣವನ್ನು ಲೇಪಿಸಿ ಅದರ ಬುಡವನ್ನು ಗೋಡಿನಿಂದ ಮುಚ್ಚಿ ದರೆ ಪುತ್ತೆ ಎಲೆ ಬಿಡುತ್ತದೆ. ಸಿಡಿಲು ಹೊಡೆದ ಮರಕ್ಕೆ ಹೆಸರು ಉದ್ದು, ಎಳ್ಳು ಪುಡಿಗಳ ಮಿಶ್ರಣವನ್ನು ತುಪ್ಪ ಮತ್ತು ಜೇನಿ ನೊಡನೆ ಬೆರೆಸಿ ಲೇಪಿಸಿ ಬೇರುಗಳಿಗೆ ಹಾಲು ಮತ್ತು ನೀರನ್ನು ಎರೆದರೆ ಬೇಗ ಬೆಳೆಯುತ್ತದೆ.

ಆನೆಯಂಥ ಮೂರ್ಖ ಪ್ರಾಣಿಗಳಿಂದ ಮುರಿಯಲ್ಪಟ್ಟ ಮತ್ತು ತುಳಿಯಲ್ಪಟ್ಟ ಮರಗಳ ಬುಡದಲ್ಲಿ ಒಣ ಸಗಣಿಯನ್ನು ಹರಡಬೇಕು. ನಂತರ ಒಂದು ಗುಳಿಯನ್ನು ತೋಡಿ ಅದನ್ನು ಗೋಡಿನಿಂದ ತುಂಬಬೇಕು. ಅನಂತರ ಆ ಮರವನ್ನು ಜೇನು, ತುಪ್ಪಗಳಿಂದ ಸವರಿ ಹಾಲು ಮತ್ತು ನೀರನ್ನೆರೆಯಬೇಕು.

ಅಂಟುವಾಳ, ಹಸುವಿನ ಕೊಂಬು, ಕುದುರೆ ಕೂದಲು, ಕರಿಮೆಣಸು, ತುಪ್ಪ ಮೊದಲಾದವುಗಳನ್ನು ಕುದಿಸಿ ಹಂದಿಯ ಕೊಬ್ಬನ್ನು ಹಾಕಿದ ಮಿಶ್ರಣದಿಂದ ಹೊಗೆ ಕೊಟ್ಟರೆ ಗಾಳಿಜನ್ಯ ರೋಗಗಳು ನಾಶಹೊಂದುವುವು.

ಬೆಂಕಿಯಿಂದ ಹಾಳಾದ ಮರಗಳನ್ನು ತಾವರೆ ಗಿಡ ಮತ್ತು ಮೃತ ಶರೀರ ನೀರಿನಿಂದ ಲೇಪಿಸಿ ಪೋಷಿಸಿದರೆ ಮರವು ತುಂಬಾ

ಚೆನ್ನಾಗಿ ಬೆಳೆಯುತ್ತದೆ. ಹಾಲು, ಜೇನು, ಬಾರ್ಲಿ ಮತ್ತು ಗೋಧಿಗಳ ಮಿಶ್ರಣವನ್ನು ನೀಡಿದರೆ ಮರಗಳ ಕಾವಮಾಲೆಯು ಒಂದು ವಾರದಲ್ಲಿ ವಾಸಿಯಾಗುತ್ತದೆ. ಕುಂಬಳ ಜಾತಿಯ ಗಿಡಗಳ ರೋಗಗಳಿಗೆ ಹಸುವಿನ ಮೂಳೆ ಮತ್ತು ಬೆಕ್ಕಿನ ಮಲ ದಿಂದ ಹೊಗೆ ಹಾಕಿದರೆ ರೋಗ ವಿಮುಕ್ತವಾಗುತ್ತವೆ.

## ಪಶುಗಳು ಮತ್ತು ವ್ಯವಸಾಯ

ಬೆಳೆಗಳನ್ನು ಬೆಳೆಸುವಿಕೆ ಮತ್ತು ಪಶುಪಾಲನೆಗಳು ವ್ಯವ ಸಾಯದ ಅವಿಭಾಜ್ಯ ಅಂಗಗಳು ; ದನಗಳು ಬೇರೆ ಮತ್ತು ಬೆಳೆ ಗಳು ಬೇರೆ ಎಂದು ವಿಂಗಡಿಸಲು ಸಾಧ್ಯವಿಲ್ಲ. ಏಕೆಂದರೆ ಈ ಸಂಬಂಧ ನಮ್ಮ ಸಂಸ್ಕೃತಿಯಷ್ಟೇ ಪ್ರಾಚೀನ.

ಹಿಂದೂಗಳಿಗಂತೂ ಹಸು, ಗೋಮಾತೆ, ಕಾಮಧೇನು ; ಇದರ ಸೆಗಣಿ ಮತ್ತು ಗಂಜಲ ಪವಿತ್ರ ವಸ್ತುಗಳು. ಮನು ಸಂಹಿತೆಯಲ್ಲಿ ಹಸುಗಳ ಬಗ್ಗೆ ಉಲ್ಲೇಖಿಸಿ, ಪ್ರಜಾಪತಿಯು ಮೊತ್ತ ಮೊದಲು ಪಶುಗಳನ್ನು ಸೃಷ್ಟಿಸಿದ, ನಂತರ ವೈಶ್ಯರಿಗೆ ನೀಡಿದ ಎಂದು ಹೇಳಲಾಗಿದೆ. ಅಲ್ಲದೆ ವೈಶ್ಯ ಹಸುಗಳನ್ನು ಇಟ್ಟು ಕೊಳ್ಳಲು ಇಷ್ಟಪಟ್ಟರೆ ಬೇರಾರೂ ಅವುಗಳನ್ನು ಇಟ್ಟುಕೊಳ್ಳ ಬಾರದು ಎಂದು ಹೇಳಲಾಗಿದೆ.

ಪಶುಪಾಲನೆಯೆಂದರೆ ಕೇವಲ ಹಸುಗಳೆಂದು ಅರ್ಥವಲ್ಲ. ಎಮ್ಮೆ, ಕುದುರೆ, ಹಸು, ಆಡು, ಕುರಿ, ಒಂಟೆ, ಕತ್ತೆ, ಹೇಸರ ಕತ್ತೆ, ಹಂದಿ, ನಾಯಿ ಮುಂತಾದವುಗಳನ್ನು ಮಾನವನ ವಿವಿಧ ಉದ್ದೇಶಗಳ ಪೂರೈಕೆಗಳಿಗಾಗಿ ಸಾಕುವಿಕೆ ಎಂದರ್ಥ. ಈ

ರೀತಿಯ ಪಾಲನೆಯನ್ನು ಕ್ಷತ್ರಿಯರು ಮತ್ತು ಇತರರೂ ಸಹಾ ಮಾಡುತ್ತಿದ್ದರು. ಗೋರಕ್ಷಣೆ ಮತ್ತು ಗೋಪಾಲನೆ ರಾಜರುಗಳ ಆದ್ಯ ಕರ್ತವ್ಯಗಳಲ್ಲೊಂದಾಗಿತ್ತು.

## ಹಿಂದೂ ಧರ್ಮದಲ್ಲಿ ಹಸು

ಹಸುವಿನ ಸ್ಥಾನ ಹಿಂದೂ ಧರ್ಮದಲ್ಲಿ ಎಷ್ಟು ಗಹನ ವೆಂಬುದನ್ನು ಮೇಲೆ ಹೇಳಿದ್ದರೂ ಸಹ ಬೃಹತ್ ಪರಾಶರ ಸಂಹಿತೆಯು ತುಂಬಾ ನಿಖರವಾಗಿ ತಿಳಿಸುತ್ತದೆ. ಕೇವಲ ಬಿಸಾಡಿದ ಹುಲ್ಲನ್ನು ತಿಂದು ಪ್ರತಿದಿನವೂ ಅವು ಹಾಲನ್ನೀಯು ತ್ತವೆ. ಆ ಹಾಲು ದೇವದೇವತೆಗಳನ್ನು ಸುಪ್ರೀತರನ್ನಾಗಿ ಮಾಡುತ್ತದೆ. ಆದ್ದರಿಂದ ಹಸುಗಳನ್ನೇಕೆ ಪೂಜಿಸಬಾರದು ? ಎಂದು ಪ್ರಶ್ನಿಸಿದ್ದಾರೆ.

ಹಸುವು ಎಲ್ಲ ದೇವದೇವತೆಗಳ ಸಂಗಮ; ಅವಳ ತಲೆಯಲ್ಲಿ ಬ್ರಹ್ಮ, ಭುಜದಲ್ಲಿ ಶಿವ, ಬೆನ್ನಮೇಲೆ ವಿಷ್ಣು, ಪಾದಗಳ ಮೇಲೆ ವೇದಗಳು, ಮಿಕ್ಕುಳಿದ ದೇವತೆಗಳು ದೇಹದ ಪ್ರತಿರೋಮಗಳನ್ನು ಆಕ್ರಮಿಸಿದ್ದಾರೆ. ಅವಳಿಗೆ ಸಲ್ಲಿಸಿದ ಪ್ರಾರ್ಥನೆಯಿಂದ ವಿಷ್ಣು ಸಂಪ್ರೀತನಾಗುತ್ತಾನೆ. ಅವುಗಳನ್ನು ಮುಟ್ಟಿದರೆ ಸಾಕು ಪಾಪ ನಾಶವಾಗುತ್ತದೆ. ಹಾಲು ನಮ್ಮನ್ನು ಪೋಷಿಸುತ್ತದೆ. ದಾನ ವಾಗಿ ನೀಡಿದರೆ ಸ್ವರ್ಗ ಸಿಗುತ್ತದೆ. ಹೀಗಿರುವಾಗ ಅದು ಪೂಜೆ ಯನ್ನೇಕೆ ಬಯಸಬಾರದು ? ಅಲ್ಲದೆ, ಕೇವಲ ಅವುಗಳ ಗೊರಸಿ ನಿಂದ ಉತ್ಪತ್ತಿಯಾದ ಧೂಳಿನಿಂದ ಮಾನವನ ಪಾಪಹರಣವಾಗು ವಾಗ ಹಸುಗಳಿಗೇಕೆ ಗೌರವ ನೀಡಬಾರದು? ಎಂದು ಕೇಳಿದ್ದಾರೆ.

ಇಂಥ ಪುಣ್ಯಕೋಟಿ ಹಸುಗಳನ್ನು ಸಾಕುವಾಗ ಕೋಪವನ್ನು ಯಾವನು ತಾಳ್ಮೆಯಿಂದ ಸಹಿಸುತ್ತಾನೋ ಅವನು ಐಶ್ವರ್ಯ ಗಳಿಸುತ್ತಾನೆ ಮತ್ತು ಸ್ವರ್ಗ ಲಭ್ಯ ; ಯಾಕೆಂದರೆ, ಹಸುಗಳು ಪವಿತ್ರವಾದವುಗಳಲ್ಲಿ ಪವಿತ್ರತಮ ; ಶುಭ ಚಿಹ್ನೆಗಳಲ್ಲಿ ಅತ್ಯುತ್ತಮ. ಅವುಗಳು ನೀರು ಕುಡಿಯುವ ಕೊಳಗಳು ಪುಣ್ಯಕ್ಷೇತ್ರಗಳು. ಅವುಗಳಿಂದ ಇಡೀ ಬ್ರಹ್ಮಾಂಡವೇ ಕಾಪಾಡಲ್ಪಡುತ್ತದೆ ಎಂದು ಹೇಳಿ ಅವುಗಳನ್ನು ಕಾಪಾಡುವವನಿಗೆ ಸ್ವರ್ಗ ಸಿಗುತ್ತದೆ, ಆದ್ದರಿಂದ ಎಚ್ಚರವಹಿಸಿ ಕಾಪಾಡಬೇಕು ಎಂದು ಬುದ್ಧಿವಾದ ಹೇಳಿದ್ದಾರೆ.

## ಪರಿಸಮಾಪ್ತಿ

ಭಾರತೀಯ ಸಂಸ್ಕೃತಿಯಷ್ಟೇ ಪ್ರಾಚೀನವಾದ ಮತ್ತು ಅದರೊಳಕ್ಕೆ ಆಳವಾಗಿ ಬೇರುಬಿಟ್ಟಿರುವ ಕೃಷಿ ತಂತ್ರಗಳ ಬಗ್ಗೆ ಸಿಂಹಾವಲೋಕನ ಮಾಡಿದೆವು. ಮತ್ತೊಮ್ಮೆ ಆಧುನಿಕ ದೃಷ್ಟಿಯಿಂದ ಈ ಪದ್ಧತಿಗಳನ್ನು ತೂಗಿ ನೋಡುವುದು ಉಚಿತವೆನಿಸುತ್ತದೆ. ಹೀಗೆ ವಿಮರ್ಶಿಸುವಾಗ ಪ್ರಾಚೀನ ಕಾಲದಲ್ಲಿ ವ್ಯವಸಾಯ ಹೇಗಿತ್ತು ? ರೈತರ ಪಾತ್ರವೆಂತಹುದು ? ಮುಂತಾದವುಗಳನ್ನು ತುಲನಾತ್ಮಕವಾಗಿ ಚರ್ಚಿಸಬಹುದು.

ಭೂಮಿ, ಉಳುಮೆ, ಅದರಲ್ಲಿ ಬರುವ ಅನೇಕ ಉಪಕರಣಗಳು ಮುಂತಾದ ಎಲ್ಲವುಗಳೂ ಸಂಸ್ಕೃತಿಯೊಡನೆ ಮಿಲನಹೊಂದಿ, ಅದರ ಅವಿಭಾಜ್ಯ ಅಂಗಗಳಾಗಿ ಉಳಿದು ದೇವ ದೇವತೆಯರ ಸ್ಥಾನ ಗಳಿಸಿದ್ದುವು. ಫಲವಾಗಿ ವ್ಯವಸಾಯವೂ ಒಂದು

ಧಾರ್ಮಿಕ ವಿಧಿ ಮತ್ತು ಅದನ್ನು ಮಾಡುವುದು ಗೌರವಯುತ ವಾದದ್ದು ಎಂದು ತಿಳಿಸಿದ್ದುದರಿಂದ ವರ್ಣಾಶ್ರಮ ಭೇದವಿಲ್ಲದೆ ಎಲ್ಲ ವರ್ಣದವರುಗಳೂ ಸಹ ಕೃಷಿ ಕೈಗೊಂಡಿದ್ದರು

ಸಸ್ಯಶಾಸ್ತ್ರ. ಅದರಲ್ಲೂ ಸಸ್ಯಗಳ ಬಾಹ್ಯರೂಪಗಳು, ಶರೀರ ಕ್ರಿಯೆಗಳು, ವಂಶಾಭಿವೃದ್ಧಿ ಮುಂತಾದವುಗಳ ಬಗ್ಗೆ ನಮ್ಮ ಪ್ರಾಚೀನರಿಗಿದ್ದ ಜ್ಞಾನ ನಮ್ಮನ್ನು ಬೆರಗುಗೊಳಿಸುತ್ತದೆ. ಸುಮಾರು 1500 ವರ್ಷಗಳಿಗೂ ಹಿಂದೆ ಇಂಥ ಜ್ಞಾನವಿತ್ತು ಎಂಬುದನ್ನು ಗ್ರಹಿಸಿದರೆ ಈ ಆಶ್ಚರ್ಯ ಮತ್ತೂ ಹೆಚ್ಚುತ್ತದೆ. ಆಗಿನ ಕಾಲದಲ್ಲಿ ರಚಿತವಾದ ಬಹುತೇಕ ಗ್ರಂಥಗಳು ಸಂಸ್ಕೃತದಲ್ಲಿ ಇದ್ದುದರಿಂದ, ಅವುಗಳು ಕೇವಲ ಉಚ್ಚವರ್ಣೀಯರ ಅಥವಾ ಅರಸರ ಸ್ವತ್ತಾಗಿ ಉಳಿಯುತ್ತಿದ್ದುದು ಅನಿವಾರ್ಯವಾಗಿತ್ತು. ಅಲ್ಲದೆ ಈ ಗ್ರಂಥಗಳನ್ನು ರಚಿಸಿದ ಋಷಿಗಳು ಸ್ವಭಾವತಃ ನಿತ್ಯ ಜೀವನದಿಂದ ಹೊರಗಿದ್ದರೂ ಸಹ ಅವರು ಕೃಷಿಯನ್ನು ಕೈಗೊಳ್ಳು ತ್ತಿದ್ದರು ಎಂಬುದು ಗಮನಾರ್ಹ. ಈ ಋಷಿಗಳು ತಮಗೆ ಅನುಭವವೇದ್ಯವಾದ ಹಾಗೂ ಸಾಮಾನ್ಯ ಜನರ ದೃಷ್ಟಿಗೆ ಸಿಲುಕಿದ ಅನುಭವಗಳನ್ನು ಎಚ್ಚರಿಕೆಯಿಂದ ಕ್ರೋಢೀಕರಿಸಿ ಸೂತ್ರರೂಪದಲ್ಲಿಟ್ಟಿದ್ದಾರೆ. ಹೀಗೆ ಮಾಡುವಲ್ಲಿ ಪ್ರಯೋಗಾತ್ಮ ಕಾರ್ಯಗಳಿಗಿಂತ ಹಲವು ಬಾರಿ ಕಾವ್ಯಾತ್ಮಕವಾಗಿ ಬಣ್ಣಿಸಿರಲೂ ಸಾಧ್ಯವಿದೆ. ಆದರೆ, ಸತ್ಯದಿಂದ ದೂರ ಸಿಡಿದಿದ್ದಾರೆಂದರೆ ಹಾಸ್ಯಾಸ್ಪದವಾಗಬಹುದು.

ಸಸ್ಯಗಳ ಬೆಳವಣಿಗೆಗೆ ನೀರು, ಗೊಬ್ಬರ ಮುಂತಾದವುಗಳು ಬೇಕು ಎಂದು ತಿಳಿದಿದ್ದ ಅಂದಿನವರಿಗೆ, ಈಗಿನ ಸೇಂದ್ರಿಯ ಗೊಬ್ಬರಗಳ ಪರಿಚಯವಿಲ್ಲದಿದ್ದರೂ ಸಹ ಸಸಾರಜನಕಯುಕ್ತ

ಮಾಂಸ, ಮೀನು ಮುಂತಾದವುಗಳನ್ನು ಬಳಸುತ್ತಿದ್ದರು. ಸಗಣಿ ಗೋಡು, ಮೂಳೆ, ಹಸಿರೆಲೆ ಮುಂತಾದವುಗಳನ್ನು ಬಳಸಿರುವುದರ ಅನೇಕ ಉದಾಹರಣೆಗಳನ್ನು ಹಿಂದೆ ನೀಡಲಾಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೊಂದಿದೆ; ಅದು, ಪ್ರಾಣಿಗಳ ಕೊಬ್ಬು, ಮಾಂಸ ಮುಂತಾದವುಗಳನ್ನು ಯಥೇಚ್ಛವಾಗಿ ಉಪಯೋಗಿಸುತ್ತಿದ್ದ ಆ ಕಾಲದಲ್ಲಿ ಅನೇಕ ಪ್ರಾಣಿಗಳನ್ನು ಕೊಲ್ಲುತ್ತಿದ್ದುದು ಬಹುಶಃ ಸಾಮಾನ್ಯ ಸಂಗತಿಯಾಗಿದ್ದಿರಬೇಕು. ಇದರಿಂದ ಅಂದಿನ ಕಾಲದಲ್ಲಿ ಬದುಕುತ್ತಿದ್ದ, ಆದರೆ ರಕ್ಷಣೆ ಪಡೆಯಲು ಪ್ರಾಕೃತಿಕವಾಗಿ ಅಸಾಧ್ಯವಾಗಿದ್ದ ಪ್ರಾಣಿಗಳಲ್ಲಿ ಅನೇಕ ಬಗೆಯವುಗಳು ನಶಿಸಿರುವ ಸಾಧ್ಯತೆಯೂ ಇದೆ.

ಇಂಥ ಆಧುನಿಕ ಯುಗದಲ್ಲೂ ಕಾಡನ್ನು ಅವಿರತವಾಗಿ ಕೊಲ್ಲುತ್ತಿದ್ದೇವೆ. ಇದರಿಂದ ಅನೇಕ ಪ್ರಾಣಿಗಳು ಹಾಗೂ ವೃಕ್ಷಗಳು ನಾಶಗೊಳ್ಳುತ್ತಿವೆ. ಪ್ರಾಕೃತಿಕ ಸಮತೋಲನ ಆಯತಪ್ಪಿ ಕುಸಿದುಬೀಳುವ ಪರಿಸ್ಥಿತಿಯಲ್ಲಿದೆ. ಇದು ನಮಗೆ ಚೆನ್ನಾಗಿ ಗೊತ್ತು. ಆದರೂ, ಕಾಡಿನ ರಕ್ಷಣೆಗಾಗಿ ನಾವುಗಳು ತೆಗೆದುಕೊಂಡಿರುವ ಎಚ್ಚರಕ್ಕೆ ದುಃಖ ಪಡಬೇಕು. ವನಮಹೋತ್ಸವ ಕೇವಲ ಸುಂದರ ಪದವಾಗಿ ಉಳಿದಿದೆ. ಆದರೆ, ವನಗಳೇ ಹೆಚ್ಚಾಗಿದ್ದ ಪೂರ್ವಕಾಲದಲ್ಲಿ ಪ್ರತಿಯೊಂದು ವೃಕ್ಷವನ್ನೂ ಎಷ್ಟು ಎಚ್ಚರವಹಿಸಿ ಪೋಷಿಸುತ್ತಿದ್ದರು ! ಕಾಡನ್ನು ಕೃತಕವಾಗಿ ಎಬ್ಬಿಸಲು ಅವರು ವಹಿಸುತ್ತಿದ್ದ ಕ್ರಮಗಳೇನು ? ಎಂಬುವನ್ನು ನಾವು ಹಿಂದಿನ ಪುಟಗಳಿಂದ ಸ್ಥೂಲವಾಗಿ ಗ್ರಹಿಸಬಹುದು.

ಅಂದಿಗೂ ಇಂದಿಗೂ ಬದಲಾಗಿರುವುದು ಕೇವಲ ಯಂತ್ರಗಳಿಂದ ಕೃಷಿ ಮಾಡುವಿಕೆ. ಅದೂ ಯಂತ್ರಗಳು ಬಂದಿದ್ದು

ಕೇವಲ ಇತ್ತೀಚೆಗೆ. ಅವಕ್ಕೂ ಮುಂಚೆಯಿದ್ದ ನೇಗಿಲುಗಳು, ಕುಡುಗೋಲು, ಕುಂಟೆ ಮುಂತಾದವುಗಳಿಗೆ ಸುಮಾರು 3000 ವರ್ಷಗಳ ದೀರ್ಘ ಚರಿತ್ರೆಯಿದೆ. ನಂಬಿಕೆಯಿಂದಲೋ ಅಥವಾ ಮತ್ತಾವ ಕಾರಣದಿಂದಲೋ ಇವುಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳ ವಿನಹ ಅಗಾಧ ಬದಲಾವಣೆಯಾಗದಿರುವುದು ಗಮನಿಸಬೇಕಾದ ಸಂಗತಿ. ನಾವು ಇಂದು ಹೇಳುತ್ತಿರುವ ಸಾಲುನಾಟಿ, ಮಿಶ್ರಬೇಸಾಯ, ಭೂಮಿಗೆ ವಿಶ್ರಾಂತಿ ಕೊಡುವಿಕೆ, ಬೆಳೆ ಪರಿವರ್ತನೆ ಇತ್ಯಾದಿಗಳು ಹೊಸವೇನಲ್ಲ. ಆದರೆ ಹಳೆಯ ತಂತ್ರಗಳೇ ಬಣ್ಣಬಳಿದುಕೊಂಡು ಆಧುನಿಕತೆಯ ಈ ಕಾಲದಲ್ಲಿ ಥಳಥಳಿಸುತ್ತಿವೆ ಅಷ್ಟೆ.

ಬೇಸಾಯ ಮಾಡುವಿಕೆ, ಭೂಮಿಯನ್ನು ರಕ್ಷಿಸುವಿಕೆ, ಗೋಸಂರಕ್ಷಣೆ ಇತ್ಯಾದಿಗಳನ್ನು ಎಚ್ಚರವಾಗಿ ಕ್ರಮವರಿತು ನಡೆಸುತ್ತಿದ್ದರು.

ಸಸ್ಯಗಳನ್ನು ಸಂರಕ್ಷಿಸಲು ಹಿಂದೆ ಬಳಸುತ್ತಿದ್ದ ವಿಧಾನಗಳು ಆಧುನಿಕ ದೃಷ್ಟಿಯಿಂದ ನಗೆಪಾಟಲಾದರೂ ಸಹ ಹೊಗೆಹಾಕುವಿಕೆ ಸಸ್ಯಗಳಿಗೆ ವಿಷಪೂರಿತ ಸಸ್ಯಗಳ ಸಾರವನ್ನು ಸಿಂಪಡಿಸುವಿಕೆಯಿಂದ ಕೀಟಬಾಧೆಯನ್ನು ತಪ್ಪಿಸಬಹುದು. ಉದಾಹರಣೆಗೆ, ಸಸ್ಯಜನ್ಯವಾದ, ತಂಬಾಕಿನ ರಸ ಮತ್ತು ಹೊಂಗೆ ಎಣ್ಣೆ. ಇವುಗಳನ್ನು ಈಗಲೂ ಸಹ ಉಪಯೋಗಿಸುತ್ತಾರೆ. ಹೊಗೆ ಹಾಕುವಿಕೆಯಿಂದ ಅನೇಕ ಕೀಟಗಳು, ಸಣ್ಣ ಸಣ್ಣ ಪ್ರಾಣಿಗಳು ಹಾಗೂ ಇಲಿಗಳನ್ನು ನಾಶಮಾಡಬಹುದು. ಈ ವಿಧಾನವನ್ನು ಹಿಂದೆಯೂ ಬಳಸಲಾಗುತ್ತಿತ್ತು. ರೋಗ ಮತ್ತು ಕೀಟಗಳ ಪೂರ್ಣ ಮಾಹಿತಿಗಳನ್ನು ಪಡೆಯಲು ಕಷ್ಟವಾಗಿದ್ದರಿಂದ ಶುದ್ಧವಾದ ಬೇಸಾಯ

ಮಾಡುವುದೇ ಉತ್ತಮವೆಂದು ತಿಳಿದಿದ್ದರು. ಸಸ್ಯಗಳ ಮೇಲ್ಮೈ ಮೇಲೆ ವಿವಿಧ ರಸಗಳನ್ನು ಸವರುವುದರಿಂದ ಕೀಟ ಹಾಗೂ ರೋಗಗಳಿಂದ ರಕ್ಷಿಸುತ್ತವೆ. ಅಲ್ಲದೆ ಆ ರಸಗಳಲ್ಲಿನ ರಸಾಯನಿಕಗಳು ಗಿಡದೊಳಕ್ಕೆ ಸಹ ಸೇರಬಹುದು. ಹೀಗೆ ಸೇರುವುದರಿಂದ ಗಿಡಗಳು ಸೊಂಪಾಗಿ ಬೆಳೆಯುತ್ತಿದ್ದವು. ಈ ವಿಧಾನವನ್ನು ತುಂಬಾ ನಾಜೂಕಾದ ರೂಪದಲ್ಲಿ ನಾವು ಉಪಯೋಗಿಸಿಕೊಂಡಿದ್ದೇವೆ. ಉದಾಹರಣೆಗೆ ಸಾರಜನಕವನ್ನು ಯೂರಿಯಾ ರೂಪದಲ್ಲಿ ನೀರಿನಲ್ಲಿ ಬೆರೆಸಿ ಸಿಂಪಡಿಸುತ್ತೇವೆ. ಹೀಗೆಯೇ ಗಿಡಗಳ ಸುತ್ತ ಕಂದಕಗಳನ್ನು ತೋಡುವುದು, ಮಣ್ಣನ್ನು ಅಗೆದು ಬಿಸಿಲಿನಲ್ಲಿ ಒಣಗಿಸುವುದು ಮುಂತಾದ ಎಲ್ಲವುಗಳೂ ಸಹ ಆಧುನಿಕ ದೃಷ್ಟಿಯಿಂದಲೂ ಸಸ್ಯಸಂರಕ್ಷಣೆಯ ಕ್ರಮಗಳೇ.

ಈ ದೃಷ್ಟಿಕೋನದಿಂದ ಪ್ರಾಚೀನ ಕಾಲದಲ್ಲಿ ಅಭಿವೃದ್ಧಿ ಹೊಂದಿದ್ದ ಮತ್ತು ಇಂದಿನವರೆಗೂ ಅದರ ಅವಿಚ್ಛಿನ್ನ ತಂತ್ರವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಆಧುನಿಕ ವ್ಯವಸಾಯವೇ ಹಿರಿದು ಪ್ರಾಚೀನ ಕೃಷಿ ಪದ್ಧತಿಗಳು ಕೇವಲ ದೃಷ್ಟಾಂತ ಹಾಗೂ ಶುಷ್ಕ ಊಹಾಪೋಹಗಳು ಎಂದು ಯೋಚಿಸಿದ ಪಕ್ಷಕ್ಕೆ ನಾವು ಎಡವುತ್ತೇವೆ. ಇಂದು ಪರಿಧಿ ದೊಡ್ಡದಾಗಿಯೇ ಹೊರತು ಮಾನವನ ಸಂಸ್ಕೃತಿಯ ಉಗಮಕಾಲದಿಂದಲೂ ದುಡಿಯುತ್ತಿರುವ ವ್ಯವಸಾಯದ ಕೇಂದ್ರ ಶಕ್ತಿಯು ಅವಿರತವಾಗಿ ದುಡಿಯುತ್ತಲೇ ಮುಂದೆಯೂ ಸಾಗುತ್ತದೆ. ಅಂದಿನಿಂದ ಇಂದಿನ ವರೆಗೂ ಈ ಸಂಬಂಧ ಅನಿರ್ವಚನೀಯವಾಗಿ ಒಂದಕ್ಕೊಂದು ಹೆಣೆದುಕೊಂಡಿದೆ.

# ಆಧಾರ ಗ್ರಂಥಗಳು


1) The Cultural Heritage of India, Vol. 1 The Ramakrishna Mission, Institute of Culture, Calcutta.

2) Vanaspat, Majumdar G. P., University of Calcutta, Calcutta.

3) Agriculture in Ancient India, Rayachaudhuri S. P., 1964, I. C. A. R New Delhi.

4) ಋಗ್ವೇದ ಸಂಹಿತಾ, ಭಾಗ-1, ವೆಂಕಟರಾವ್ ಹೆಚ್. ಪಿ., 1948 ಶ್ರೀ ಚಾಮುಂಡೇಶ್ವರಿ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

5) Story of Civilization, Our Oriental Heritage, India and Her Neighbours. Will Durant, 1954, Simon and Schster Newyork

6) Agriculture and Allied Arts in Vedic India Yagnanaraya Aiyer, 1949


**